

ಆಶ್ವಲಾಯನೀಯ

# ಔರ್ಧ್ವದೈಹಿಕ ಪ್ರಯೋಗಃ



೧೯೮೦

ಸಂಗ್ರಾಹಕ ಮತ್ತು ಪ್ರಕಾಶಕ :

**ಮಧೂರು ವೆಂಕಟೇಶ ಶರಳಾಯ,**

**ಶಿರೋಮಣಿ ಮತ್ತು ವಿದ್ವಾನ್,**

**ಮಂಡ್ಯ.**



ಆಶ್ವಲಾಯನೀಯ

# ಔರ್ಧ್ವದೈಹಿಕ ಪ್ರಯೋಗವು

---


ಸಂಗ್ರಾಹಕ ಮತ್ತು ಪ್ರಕಾಶಕ:

**ಶ್ರೀ ಎಂ. ವೆಂಕಟೇಶ ಶರಳಾಯ, ಶಿರೋಮಣಿ.**

---

ಸಲಹೆಯನ್ನಿತ್ತವರು:

**ಶ್ರೀ ಎಂ. ಮಹಾದೇವ ಶರಳಾಯ.**

---

ಸಂಶೋಧಕರು:

**ಶ್ರೀ ಶಿವನಾರಾಯಣ ಶರಳಾಯ,**

ಪುರೋಹಿತ, ಮಧೂರು.


---

**ಬೆಲೆ ರೂ. ೮—೦೦**

ಪ್ರಥಮ ಮುದ್ರಣ : ಮಾರ್ಚ್, ೧೯೫೭
ದ್ವಿತೀಯ ಮುದ್ರಣ : ಜನವರಿ, ೧೯೮೦



ಮುದ್ರಕರು :
ಶ್ರೀ ಸಿ. ಜಿ. ಪದ್ಮರಾಜಶರ್ಮ
ಶ್ರೀ ಜಯಲಕ್ಷ್ಮೀ ಪ್ರೆಸ್,
ಮಂಡ್ಯ.

# ದ್ವಿತೀಯ ಮುದ್ರಣದ ಮುನ್ನುಡಿ.

॥ ಸರಸ್ವತೀನಸ್ಸುಭಗಾಮಯಸ್ಕರತ್ ॥

ಪ್ರಿಯ ಧರ್ಮಾಭಿಮಾನಿಗಳೇ,

ಇದೀಗ ನಾನು ಆಶ್ವಲಾಯನೀಯ ಔರ್ಧ್ವದೈಹಿಕ ಪ್ರಯೋಗದ ದ್ವಿತೀಯಮುದ್ರಣದ ಪ್ರತಿಯನ್ನು ತಮ್ಮ ಮುಂದೆ ಇಡಲು ತುಂಬಾ ಸಂತೋಷಿಸುತ್ತೇನೆ. ಈ ದ್ವಿತೀಯ ಮುದ್ರಣದಲ್ಲಿ ಹೆಚ್ಚು ಸೇರಿಸಿದ ಭಾಗಗಳು ಯಾವುವೆಂದರೆ ಶವಕ್ಕೆ ಪ್ರಾಣಪ್ರತಿಷ್ಠಾಪನೆ, ಪಾಲಾಶ ಸಂಸ್ಕಾರ, ಅಸ್ಥಿಸಂಸ್ಕಾರ ಮತ್ತು ಅನೇಕ ದುರ್ಮರಣಪ್ರಾಯಶ್ಚಿತ್ತಕ್ರಮ ಇತ್ಯಾದಿಗಳ ವಿಧಾನವು.

ಮೊದಲನೆಯ ಮುದ್ರಣಕ್ಕೆ ಯಾರೆಲ್ಲ ತನುಮನೋಧನಗಳಿಂದ ಪ್ರೋತ್ಸಾಹವನ್ನು ಇತ್ತು ಸಹಕರಿಸಿದರೊ ಅವರೆಲ್ಲರಿಗೂ ಈ ಮುದ್ರಣದಲ್ಲಿಯೂ ನಾನು ಪೌನಃಪುನ್ಯೇನ ಧನ್ಯವಾದವನ್ನರ್ಪಿಸುತ್ತೇನೆ. ಮತ್ತು ಇದಕ್ಕೆ ಪುನಃ ವಿಶೇಷವಾಗಿ ಅನೇಕವಿಧವಾದ ಸಂಸ್ಕಾರ ಕ್ರಮಗಳನ್ನು ಬರೆದು ಸೇರಿಸಬೇಕೆಂದು ಸಲಹೆಕೊಟ್ಟದ್ದು ಮಾತ್ರವಲ್ಲದೆ ಅವುಗಳನ್ನೆಲ್ಲ ಒರೆದುಕಳುಹಿಸಿ ಅಮೂಲ್ಯ ಸಹಕಾರವನ್ನೂ ತಿಳುವಳಿಕೆಯನ್ನೂ ಇತ್ತ ನನ್ನ ತೀರ್ಥರೂಪಸಮಾನರೂ, ಗುರುವರ್ಯರೂ, ಪುರೋಹಿತರೂ, ವಿವೇಕಿಗಳೂ, ಕುಲಪತಿಗಳೂ ಆಗಿರುವ ಶ್ರೀ ಶಿವನಾರಾಯಣ ಶರಳಾಯ, ಪುರೋಹಿತ, ಮಧೂರು ಇವರಿಗೆ ನಾನು ಆಜನ್ಮ ಋಣಿಯು.

ಪ್ರಕೃತ ಈ ದ್ವಿತೀಯ ಮುದ್ರಣದಲ್ಲಿ ವಿಶೇಷವಾಗಿ ಸೇರಿಸಿಷ "ಮೃತದೇಹದಲ್ಲಿ ಪ್ರಾಣಪ್ರತಿಷ್ಠೆಮಾಡುವ ವಿಧಿ" ಮೊದಲಾದವುಗಳನ್ನೂ, ಪಕ್ಷಿಣಾಯನಮರಣಾದಿ ಪ್ರಾಯಶ್ಚಿತ್ತಗಳನ್ನೂ ಗ್ರಂಥದ ಕೊನೆಯಲ್ಲಿ ಎಂದರೆ [illegible] ನೆಯ ಪುಟದಿಂದ ಇರುವ "ಪಂಶಿಷ್ಟ" ಭಾಗದಲ್ಲಿನೋಡಿ ಸಂದರ್ಭಾನುಸಾರ ಉಪಯೋಗಿಸಿಕೊಳ್ಳಬೇಕೆಂದು ಶ್ರದ್ಧಾಳುಗಳಲ್ಲಿ ಸವಿನಯ ವಿಜ್ಞಾಪನೆ.

ಪ್ರಕೃತ ಈ ಪುಸ್ತಕವನ್ನು ತಪ್ಪುಬಾರದ ರೀತಿ ತಾಳ್ಮೆಯಿಂದ ಅಂದವಾಗಿ ಮುದ್ರಿಸಿಕೊಟ್ಟ ಮಂಡ್ಯದ ಶ್ರೀ ಜಯಲಕ್ಷ್ಮೀ ಪ್ರೆಸ್ಸಿನ ಮಾಲೀಕರಾದ ಶ್ರೀ ಸಿ. ಜಿ. ಪದ್ಮರಾಜಶರ್ಮರಿಗೆ ಮತ್ತು ಇವರ ಚಿರಂಜೀವಿಗಳಿಗೂ ತುಂಬಾ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಈ ಮುದ್ರಣದಲ್ಲಿ ಒಂದು ತಪ್ಪೂ ಬರಬಾರದೆಂದು ಬೇಕಾದಷ್ಟು ಶ್ರಮಿಸಿರುವೆವಾದರೂ ಮನುಷ್ಯಾವಸ್ಥೆಯಲ್ಲಿ ಅಪ್ಪಿತಪ್ಪಿ ಸ್ಖಾಲಿತ್ಯವು ಬಂದಿದ್ದರೆ ಅದನ್ನು ಓದುಗರು ಸರಿಪಡಿಸಿಕೊಳ್ಳಬೇಕಾಗಿ ವಿನಯದಿಂದ ವಿಜ್ಞಾಪಿಸಿಕೊಳ್ಳುತ್ತೇನೆ.

ಮಾಘ ಶುಕ್ಲ ಚತುರ್ಥೀ
ಸಿದ್ಧಾರ್ಥ ಸಂವತ್ಸರ
[illegible]1-1-1980

ಇಂತಿ ವಿದ್ವಜ್ಜನ ವಿಧೇಯ,
ಮಧೂರು ವೆಂಕಟೇಶ ಶರಳಾಯ
ಶಿರೋಮಣಿ ವಿದ್ವಾನ್.

# ಪ್ರಸ್ತಾವನೆ

“ ಧೀನಾಮವಿತ್ರ್ಯವತು ”

ಆಶ್ವಲಾಯನೀಯ ಸತ್ಕರ್ಮಾಭಿಮಾನಿಗಳೇ,

ನಮ್ಮ ಈ ಬ್ರಾಹ್ಮಣಸಮಾಜದಲ್ಲಿ ಐಹಿಕಶರೀರಕ್ಕಿರುವ ಗರ್ಭಾಧಾನಾದಿ ಪೂರ್ವಸಂಸ್ಕಾರಗಳು ಆಚಾರ್ಯಮುಖದಿಂದಲಾದರೂ ಸಮಂತ್ರಕವಾಗಿ ನಡೆದುಕೊಂಡು ಬರುತ್ತವೆ. ಹೀಗೆಯೇ ಆಮುಷ್ಮಿಕಶರೀರಕ್ಕಿರುವ ದಹನಾದಿ ಸಂಸ್ಕಾರಗಳು ಈಗ ಹೆಚ್ಚಾಗಿ ಅಮಂತ್ರಕದಿಂದಲೇ ನಡೆಯಬೇಕಾಗಿ ಬಂದೊದಗುವ ವಿಷಯವು ಸರ್ವವಿದಿತವಷ್ಟೆ ! ಇದರ ಮೂಲಕಾರಣವಾವುದೆಂದರೆ, ಒಂದನೆಯದು ಮರಣಕಾಲವು ಅನಿಶ್ಚಿತವಾಗಿರುವುದು. ಎರಡನೆಯದು ಸಂಸ್ಕೃತಜ್ಞಾನವು ಕಡಿಮೆಯಾಗಿರುವುದು. ಇವುಗಳಲ್ಲಿ ಪ್ರಥಮಹೇತುವನ್ನು ಮೊದಲಾಗಿ ತಿಳಿದು ಅದನ್ನು ನಿವಾರಿಸುವುದು ಸಾಮಾನ್ಯತಃ ಸರ್ವಜನರಿಗೂ ನಿಲುಕದ ವಿಷಯವು. ಅದಂತಿರಲಿ.

ನಮ್ಮ ವಿದ್ಯಾವಂತರಾದ ಹಿರಿಯರು ನಮ್ಮ ಸಂಸ್ಕಾರಗಳ ಪೂರ್ವಾಪರಪ್ರಯೋಗಗಳನ್ನು ಸಂಸ್ಕೃತದಿಂದಲೇ ನಿರೂಪಿಸಿರುವರು. ಈ ಪ್ರಯೋಗಗಳಲ್ಲಿ ಚೆನ್ನಾಗಿ ಅರಿತ ನುರಿತ ವಿದ್ವನ್ಮಣಿಗಳಾದ ಪುರೋಹಿತರು ಕೆಲವರಿಗೆ ಇರುತ್ತಾರಾದರೂ ಈ ಅನಿರೀಕ್ಷಿತವಾದ ಸಂಗತಿಗೆ ಅವರನ್ನು ನಿರೀಕ್ಷಿಸುವಾಗ ಕಾಲಾತಿಕ್ರಮ, ಪರ್ಯುಷಿತಾದ್ಯನೇಕ ದೋಷಗಳು ಸಂಭವಿಸುತ್ತವೆ. “ಹಾಗಾದರೆ ತಾವಾಗಿ ಪ್ರಯೋಗವನ್ನು ನೋಡಿಕೊಂಡಾದರೂ ಕ್ರಿಯೆಗಳನ್ನು ಮಾಡಲಿ” ಎಂದರೆ ಅಂತಹ ಕರ್ಮಶ್ರದ್ಧಾಳುಗಳಲ್ಲಿ ಅನೇಕರಿಗೆ ಅಮರವಾಣಿಯ ಅರಿವು ಊನವಾಗಿರುವುದರಿಂದ ಅಲ್ಲಲ್ಲಿ ಈಗ ಗತ್ಯಂತರವಿಲ್ಲದೆ ಅಮಂತ್ರಕವಾಗಿಯೇ ದಹನಾದಿಕ್ರಿಯೆಗಳನ್ನು ಮಾಡಬೇಕಾಗಿ ಬಂದೊದಗುತ್ತದೆ. ಈ ದುರವಸ್ಥೆಯ

ಪ್ರಾಯಶ್ಚಿತ್ತಾರ್ಹವಾಗಿರುವುದರಿಂದ ಊನವಯಸ್ಕನಾದ ನಾನು ಸಂಸ್ಕಾರಾಭಿಮಾನಿಗಳಾದ ಹಲವು ಹಿರಿಯರ ಹಾಗೂ ಕಿರಿಯರ ಅಭಿಮತದಂತೆ ಆ ಎರಡನೇ ಕಾರಣವನ್ನು ಯಥಾಮತಿ ಹೋಗಲಾಡಿಸಲು ಈ ದಹನಾದಿ ದಶಾಹಾನ್ತ ಕ್ರಿಯೆಗಳನ್ನು ಕನ್ನಡಿಸಿರುವೆನು.

ಇದರಲ್ಲಿ ಕ್ರಿಯೆಗಳನ್ನು ನಿರೂಪಿಸುತ್ತಿರುವ ದೇವವಾಣಿಯನ್ನು ಮಾತ್ರ ಕನ್ನಡ ಭಾಷೆಗನುಗುಣವಾಗುವಂತೆ ಕನ್ನಡ ಭಾಷೆಯಲ್ಲಿ ಪರಿವರ್ತಿಸಿದ್ದೇನೆಯೇ ಹೊರತು ಅಪರಿವರ್ತನೀಯಗಳಾದ ಮಂತ್ರಗಳನ್ನು ಪರಿವರ್ತಿಸಲಿಲ್ಲ. ಅಲ್ಲದೆ ಅಮೂಲವಾಗಿ ಯಾವುದನ್ನೂ ಉಲ್ಲೇಖಿಸಲೂ ಇಲ್ಲ. ಈ ಪ್ರಯೋಗವು ಋಗ್ವೇದೀಯ ಪ್ರಯೋಗರತ್ನ, ಬ್ರಹ್ಮಕರ್ಮ ಸಮುಚ್ಚಯಾದಿ ಪ್ರಾಚೀನಾರ್ವಾಚೀನ ಗ್ರಂಥಗಳಿಗನುಸಾರವಾಗಿ ಬರೆಯಲ್ಪಟ್ಟಿದೆ, ಮತ್ತು ಕೆಲ ದೇಶಾಚಾರಗಳೂ ಹೆಸರೆತ್ತಿ ಅಲ್ಲಲ್ಲಿ ಆವರಣದೊಳಗೆ ಬರೆಯಲ್ಪಟ್ಟಿವೆ.

ಆ ಗ್ರಂಥಗಳಲ್ಲಿ, ದಹನಾನಂತರ ನಿತ್ಯಬಲಿ, ನಗ್ನಪ್ರಚ್ಛಾದನ, ಪಾಥೇಯ, ವಿಷಮಶ್ರಾದ್ಧಗಳನ್ನು ನದೀತೀರದಲ್ಲಿ ಮಾಡಿ ಎಲ್ಲರೂ ಗೃಹದ್ವಾರದಲ್ಲಿ ಹಸ್ತಶುದ್ಧಿಪೂರ್ವಕ ಮನೆಯೊಳಗೆ ಹೋಗಬೇಕೆಂದು ಹೇಳಲ್ಪಟ್ಟಿದ್ದರೂ ಈ ಗ್ರಂಥದಲ್ಲಿ ಈ ದೇಶದ ಪದ್ಧತಿಯನ್ನನುಸರಿಸಿ ದಹನಾನಂತರ ಸಚೇಲಸ್ನಾನ ತಿಲಾಂಜಲಿಗಳನ್ನು ಮಾಡಿ ಹಸ್ತಶುದ್ಧಿಪೂರ್ವಕ ಮನೆಗೆ ಹೋಗಿ ಅಲ್ಲಿ ನಿತ್ಯಬಲ್ಯಾದಿ ಶ್ರಾದ್ಧಗಳನ್ನು ಮಾಡುವುದಾಗಿ ಬರೆಯಲ್ಪಟ್ಟಿದೆ. ಇದೇ ರೀತಿಯಲ್ಲಿ ವೈದ್ಯನಾಥೀಯಸ್ಮೃತಿಮುಕ್ತಾಫಲದಲ್ಲಿ ಕರ್ತೃಜ್ಞಾತ್ಯಾದಿಗಳಿಗೆ ಕ್ಷೌರವು, ದಹನ–ಸಚೇಲ ಸ್ನಾನಗಳ ಅನಂತರ ಉದಕದಾನಾಂಗವಾಗಿ ವಿಧಿಸಲ್ಪಟ್ಟಿದ್ದರೂ ಪ್ರಯೋಗರತ್ನ, ಸಮುಚ್ಚಯಾದಿ ಪ್ರಯೋಗಕರ್ತೃಗಳು ಪ್ರಾರಂಭದಲ್ಲಿ ದಹನಕ್ರಿಯಾಂಗವಾಗಿ ಈ ಕ್ಷೌರಕ್ರಿಯೆಯನ್ನು ಮಾಡಲು ವಿಧಿಸಿರುವುದರಿಂದ ಇದರಲ್ಲಿಯೂ ತದ್ರೀತಿಯಲ್ಲೇ ಬರೆಯಲ್ಪಟ್ಟಿದೆ. ವಿದ್ವಾಂಸರು ಯಥೋಚಿತವಾಗಿ ಪರಿಗ್ರಹಿಸಬಹುದು.

ಸಂಕಲ್ಪಾದಿಗಳಲ್ಲಿ ಸಂಸ್ಕಾರದ ಫಲವು ಪ್ರೇತಗಾಮಿಯೇ ಆಗಿರುವುದರಿಂದ "ಸಂಸ್ಕರಿಷ್ಯಾಮಿ" ಇತ್ಯಾದಿ ಪರಸ್ಮೈ ಪದವನ್ನೇ ಉಪಯೋಗಿಸಬೇಕು. ಪ್ರೇತಕ್ಕೆ ಪಿತಃ, ಮಾತಃ, ಇತ್ಯಾದಿ ಸ್ವಸಂಬೋಧನವನ್ನೂ, ಶರ್ಮನ್ ಶಬ್ದವನ್ನೂ ಉಪಯೋಗಿಸಬಾರದು. ಎಂದು ಶಾಸ್ತ್ರವಚನಗಳಿರುವುದರಿಂದ ಅವನ್ನನುಸರಿಸಿ ಆಯಾ ಸಂದರ್ಭಗಳಲ್ಲಿ ಪರಸ್ಮೈ ಪದವೂ, ಮತ್ತು ಕೇವಲ ಗೋತ್ರನಾಮಗಳೂ ಕೂಡ ಇದರಲ್ಲಿ ಉಪಯೋಗಿಸಲ್ಪಟ್ಟಿವೆ. ಉಪೋಪಸರ್ಗವಾದ ಷ್ಠಾಧಾತುವು ಅಕರ್ಮಕವಾದರೆ "ಅಕರ್ಮಕಾಚ್ಚ" ಎಂಬ ಪಾಣಿನೀಯ ಸೂತ್ರಾನುಸಾರ ಅದಕ್ಕೆ ಆತ್ಮನೇಪದಪ್ರತ್ಯಯವೇ ಯುಕ್ತವಾದ್ದರಿಂದ "ಉಪತಿಷ್ಠತಾಂ" ಎಂದು ಅಲ್ಲಲ್ಲಿ ಬರೆಯಲ್ಪಟ್ಟಿದೆಯೆಂದು ವಾಚಕಮಹಾಶಯರು ಗಮನಿಸಬೇಕು.

ಈ ವಿಷಯದಲ್ಲಿ ಕಿರಿಯನಾದ ನನ್ನನ್ನು ಅತ್ಯಂತ ಪ್ರೋತ್ಸಾಹಿಸಿದ ಎಲ್ಲಾ ಹಿರಿಯ ಮತ್ತು ಕಿರಿಯ ಮಹನೀಯರಿಗೂ ನಾನು ತುಂಬಾ ಕೃತಜ್ಞನಾಗಿದ್ದೇನೆ. ಮತ್ತು ವಿಶೇಷವಾಗಿ ಐದಾರು ವರ್ಷಗಳಿಂದೀಚೆಗೆ ನಿರಂತರವಾಗಿ ಪ್ರೋತ್ಸಾಹಿಸುತ್ತಾ ನನ್ನಿಂದ ಈ ಸತ್ಕಾರ್ಯವನ್ನು ಮಾಡಿಸಿದ ಬ್ರ. ಶ್ರೀ ವಾಸುದೇವ ಕಲ್ಲೂರಾಯರು, ಪಿಲಿಕ್ಕಳ ಇವರಿಗೆ ಅನುದಿನ ವಿಧೇಯನಾಗಿರುವೆನು. ಹಲವು ಮಹನೀಯರ ಸೂಚನೆಯಂತೆ ಇದರ ಮುದ್ರಣಕ್ಕೆ ಕೈ ಹಚ್ಚಲು ಆರ್ಥಿಕ ಪರಿಸ್ಥಿತಿಯಿಂದ ನಾನು ತಟಸ್ಥನಾಗಿರುವಾಗ ಸಮಯೋಚಿತ ಸಂಪೂರ್ಣ ದ್ರವ್ಯಸಹಾಯವನ್ನಿತ್ತು ಸಹಕರಿಸಿದ **ಶ್ರೀವರ್ಮಾ ವಾಸುದೇವ ಕಡಂಬಳಿತ್ತಾಯರು, ಕುಂಡಾಪು** ಇವರ ಈ ಮಹೋಪಕಾರವು ಚಿರಸ್ಮರಣೀಯವಾಗಿದೆ.

ನವೀನ ಪದ್ಧತಿಯಂತೆ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯಲು ಬಿನ್ನವಿಸಿಕೊಂಡಕೂಡಲೇ ಧಾರ್ಮಿಕ ಗ್ರಂಥಗಳ ಹಾಗೂ ಧಾರ್ಮಿಕ ಜನತೆಯ ಮೇಲಿನ ಅನುರಾಗದಿಂದ ತಮ್ಮ ಸಾವಿರಾರು ಕಾರ್ಯಗಳನ್ನು ಬದಿಗಿಟ್ಟು ಸಾರವತ್ತಾದ ಮಾತುಗಳಿಂದ ಹಿತಮಿತವಾಗಿ ಮುನ್ನುಡಿಯನ್ನು ಬರೆ

ಕೊಟ್ಟದ್ದು ಮಾತ್ರವಲ್ಲದೆ ಸಕಾಲದಲ್ಲಿ ಯೋಗ್ಯ ಉಪದೇಶವನ್ನಿತ್ತು ಹರಸಿದ ನನ್ನ ಗುರುವೃಂದದಲ್ಲಿ ರಾರಾಜಿಸುತ್ತಿರುವ ಪೆರಡಾಲ ಮಹಾಜನ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿರುವ ಶ್ರೀಮಾನ್ ಕೆ. ಶ್ಯಾಮ ಭಟ್ಟ, ಎಂ.ಎ. ಇವರನ್ನು ನಾನೆಂದೂ ಮರೆಯಲಾರೆನು. ಹೀಗೆಯೇ ಅವರ ಪ್ರೋತ್ಸಾಹವು ಇನ್ನೂ ನನಗೆ ಆಗಾಗ ದೊರೆಯುತ್ತಿರಲೆಂದು ಬಯಸುತ್ತೇನೆ.

ಈ ಪುಸ್ತಕದ ಪ್ರಥಮ ಮುದ್ರಣವನ್ನು ಆಮೂಲಾಗ್ರವಾಗಿ ಚಾಣಾಕ್ಷತೆಯಿಂದ ಪರಿಶೀಲಿಸಿ ತಿದ್ದಿ ಸ್ವಾಶಯಗಳನ್ನಿತ್ತು ಉಪಕರಿಸಿದ ಎಲ್ಲಾ ಗುರು ಹಿರಿಯರಿಗೂ ನನ್ನ ಅನೇಕ ವಂದನೆಗಳು. ಈ ಪ್ರಯೋಗವನ್ನು ಆದಷ್ಟು ಕಡಿಮೆ ದರದಲ್ಲಿಯೂ ಅಂದಚಂದವಾಗಿ ಅನ್ಯೂನಾನತಿರಿಕ್ತವಾಗಿ ಮುದ್ರಿಸಿ ಕೊಟ್ಟು ಜನತೆಯ ಮುಂದೆ ಕಂಗೊಳಿಸುವಂತೆ ಮಾಡಿದ ಸಿರಿಗನ್ನಡ ಮುದ್ರಣಾಲಯದ ಮಾಲಿಕರಾದ ಶ್ರೀ ಎಸ್. ಕೃಷ್ಣಭಟ್ಟರಿಗೆ ತುಂಬಾ ಆಭಾರಿಯಾಗಿರುವೆನು.

ನಾನು ಈ ರಚನೆಯು ನಿರ್ದುಷ್ಟವಾಗಲು ಯಥಾಮತಿ ಯಥಾಶಕ್ತಿ ಶ್ರಮಿಸಿರುವೆನಾದರೂ ಮಾನುಷಸಹಜವಾದ ಪ್ರಮಾದದ ದೆಸೆಯಿಂದ ಎಲ್ಲಾದರೂ ಚ್ಯುತಿಗಳು ಅಗೋಚರವಾಗಿ ಸಂಭವಿಸಿದ್ದರೆ ಅವೆಲ್ಲವೂ ಭಗವಂತನಾದ ಅಚ್ಯುತನ ನಾಮಸ್ಮರಣೆಯಿಂದ ನಾಶವಾಗಿ ಈ ಪ್ರಯತ್ನವು ಸಂಪೂರ್ಣತೆಯನ್ನು ಹೊಂದುವುದೆಂದು ನಂಬಿ ಈ ವಾಙ್ಮುಖದಿಂದ ವಿರಮಿಸುವೆನು.

'ಯೂಯಂ ಪಾತ ಸ್ವಸ್ತಿಭಿಸ್ಸದಾ ನಃ"

ಪುಷ್ಯ ಕೃಷ್ಣ ತ್ರಯೋದಶೀ
ಮನ್ಮಥ
9-2-1956

ಕರಳಾಯ ಮ. ವೆಂಕಟೇಶ ಶರ್ಮಾ
ಶಿರೋಮಣಿ.
ಗ್ರಂಥಕರ್ತ.

॥ ಓಂ ॥

—॥ ಯದ್ಭದ್ರಂ ತನ್ನ ಆಸುವ ॥—



ಸಂಗ್ರಾಹಕರು

ವೇದೋಪನಿಷತ್ತುಗಳನ್ನು ಜೊತೆಯಲ್ಲಿ ಹೇಳುತ್ತಿರುವ
ತಮ್ಮ ಪುತ್ರ ಚಿ॥ ನಾರಾಯಣನೊಂದಿಗೆ.

# ಮುನ್ನುಡಿ

— ಧರ್ಮೇ ಸರ್ವಂ ಪ್ರತಿಷ್ಠಿತಂ —

ನಮ್ಮ ಹಿಂದೂಧರ್ಮವು ಅದರ ವಿಶೇಷವಾದ ಶಿಸ್ತಿನಿಂದಲಾಗಿ ಬೆಳಗಿದೆ. ಹಿಂದುಗಳ ಜೀವನದ ಪ್ರತಿಯೊಂದು ಹಂತದಲ್ಲಿಯೂ ಧರ್ಮ ನಿಯಮಗಳ ಪ್ರಭಾವವು ಎದ್ದು ಕಾಣುತ್ತಿದೆ. ವಿವಿಧ ಕ್ಷೇತ್ರಗಳಲ್ಲಿ ಹಿಂದುಗಳ ಕರ್ತವ್ಯವೇನೆಂಬುದನ್ನು ಅವರ ಪವಿತ್ರ ಗ್ರಂಥಗಳು ವಿಶದಪಡಿಸುತ್ತವೆ. ಇಂತಹ ಧರ್ಮ ನಿಯಮಗಳ ಮರ್ಮವನ್ನರಿತು ಪ್ರವರ್ತಿಸಿದರೇನೆ ಮಾನವನು ಪ್ರಗತಿಯನ್ನು ಪಡೆಯುವನು. ಇರಲಿ.

ಹಿಂದುಗಳ ಕರ್ತವ್ಯವನ್ನು ಬೋಧಿಸುವ ಸಂಗ್ರಹಗ್ರಂಥಗಳ ಸಾಲಿಗೆ ನಮ್ಮ ಮಿತ್ರರಾದ ಶ್ರೀ ಮಧೂರು ವೆಂಕಟೇಶ ಶರಳಾಯ, ಶಿರೋಮಣಿ ಇವರು 'ಔರ್ಧ್ವ ದೈಹಿಕ ಪ್ರಯೋಗ' ವೆಂಬ ತಮ್ಮ ಕನ್ನಡ ಗ್ರಂಥವನ್ನು ಸೇರಿಸಿ ಋಗ್ವೇದಿಗಳಿಗೆ ತುಂಬಾ ಉಪಕಾರವನ್ನೆಸಗಿದ್ದಾರೆ ಎಂಬುದು ನಮಗೆ ಬಹಳ ಸಂತೋಷದ ವಿಷಯ. ಶ್ರೀಯುತರು ಅನೇಕ ಆಧಾರಗಳನ್ನು ಪರಿಶೀಲಿಸಿ ಅವುಗಳ ಸಾರವನ್ನೀ ಗ್ರಂಥದಲ್ಲಿ ನಿರೂಪಿಸಿದ ಕಾರಣ ದಹನಾದಿ ಔರ್ಧ್ವದೈಹಿಕಕ್ರಿಯೆಗಳನ್ನು ಮಾಡುವವರಿಗೆ ಬೇರೆ ಗ್ರಂಥಗಳ ಅಗತ್ಯ ಬೀಳಲಿಕ್ಕಿಲ್ಲ.

ಧರ್ಮಾಭಿಮಾನಿಗಳಾದ ಯುವಕ ಶರಳಾಯರಿಗೆ ಸರ್ವಶಕ್ತನು ಸಕಲ ಸೌಕರ್ಯಗಳನ್ನು ಒದಗಿಸಿ ಇನ್ನೂ ಹೆಚ್ಚಿನ ಸಮಾಜಸೇವೆಯನ್ನು ಅವರಿಂದ ಮಾಡಿಸಲಿ ಎಂಬುದೇ ನಮ್ಮ ಬಯಕೆ.

ಇಂತಿ,

ಮಹಾಜನ ಸಂಸ್ಕೃತ ಕೋಲೇಜ್,
ಪೆರಡಾಲ,
ತಾ॥ 10—2—1956.

ಕೆ. ಶ್ಯಾಮ್ ಭಟ್ಟ, ಎಂ.ಎ.,
ಪ್ರಿನ್ಸಿಪಾಲ್.

## ಮಹಾಜನ ಸಂಸ್ಕೃತ ಕೋಲೇಜಿನ
## ವೈಸ್ ಪ್ರಿನ್ಸಿಪಾಲರವರಾದ ವೇದವೇದಾಂಗಾದಿ ಸಮಸ್ತ
## ವಿದ್ಯಾನಿಷ್ಣಾತರಾದ ಬ್ರಹ್ಮಶ್ರೀ
## ದರ್ಭೆ ನಾರಾಯಣ ಶಾಸ್ತ್ರಿಗಳವರ ಸ್ವಾಶಯಗಳು.

ತ್ರಿವರ್ಗಸಾರವಾದ ಧರ್ಮವು ಯಥಾವಿಧಿಯಾಗಿ ಸತ್ಕರ್ಮಗಳನ್ನಾಚರಿಸುವುದರಿಂದ ಸಿದ್ಧಿಸುವುದು. ಐಹಿಕಾಮುಷ್ಮಿಕಫಲಗಳೂ ವಿಧಿಹೀನವಾದ ಆಚರಣೆಯಿಂದ ದುರ್ಲಭಗಳೇ ಸರಿ. ಆದುದರಿಂದ ಶುಭಾಶುಭಕರ್ಮಗಳನ್ನು ವಿಧ್ಯನುಸಾರ ಲೋಪವಿಲ್ಲದೆ ಆಚರಿಸುವುದು ಪ್ರತಿಯೊಬ್ಬ ಆಸ್ತಿಕಮಹಾಶಯನ ಆದ್ಯಕರ್ತವ್ಯವಾಗಿದೆ. ಆದರೆ, ಪ್ರಯೋಗಗ್ರಂಥಗಳೆಲ್ಲಾ ಗೀರ್ವಾಣವಾಣಿಯಲ್ಲಿರುವುದರಿಂದ ಗೀರ್ವಾಣಭಾಷಾಜ್ಞಾನ ಚೆನ್ನಾಗಿಲ್ಲದವರು ಕರ್ಮಾಚರಣೆಯ ಯಥಾವತ್ತಾದ-ಜ್ಞಾನವನ್ನು ಆ ಗ್ರಂಥಗಳಿಂದ ಹೊಂದುವುದು ಕಷ್ಟವಾಗಿದೆ.

ಶ್ರೀಯುತ ವೆಂಕಟೇಶ ಶರಳಾಯರು ಈ ಕೊರತೆಯನ್ನು ನಿವಾರಿಸಿದ್ದಾರೆ. ಅವರು ರಚಿಸಿರುವ ಆಶ್ವಲಾಯನೀಯ ಔರ್ಧ್ವದೈಹಿಕ ಪ್ರಯೋಗದ ಕನ್ನಡ ಅನುವಾದವು ಸರಲವಾಗಿಯೂ, ಸುಂದರವಾಗಿಯೂ, ವಿಷಯಗಳನ್ನು ನಿರೂಪಿಸುವುದಲ್ಲದೆ ಪುರೋಹಿತವರ್ಗಕ್ಕೂ ಇತರರಿಗೂ ಬಹಳ ಉಪಯುಕ್ತವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಈ ಧಾರ್ಮಿಕ ಗ್ರಂಥವನ್ನು ಆಸ್ತಿಕ ಮಹನೀಯರೆಲ್ಲರೂ ಆದರಿಸಿ ಗ್ರಂಥಕಾರರು ಇನ್ನೂ ಕನ್ನಡದಲ್ಲಿ ಇಂತಹ ಉಪಯುಕ್ತ ಗ್ರಂಥಗಳನ್ನು ಬರೆದು ಧಾರ್ಮಿಕಜನತೆಯ ಮುಂದಿಡುವಂತೆ ಪ್ರೋತ್ಸಾಹಿಸುವರೆಂದು ಆಶಿಸುತ್ತೇವೆ.

ಈ ಗ್ರಂಥಕಾರರಿಗೆ ಭಗವಂತನು ಸರ್ವತೋಮುಖವಾದ ಜಯವನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

ಪೆರಡಾಲ,

9–2–1956.

**ಡಿ. ನಾರಾಯಣ ಭಟ್ಟ,**
ವೈಸ್ ಪ್ರಿನ್ಸಿಪಾಲ್,
ಮಹಾಜನ ಸಂಸ್ಕೃತ ಕೋಲೇಜ್.

## ಉಕ್ಕಿನಡ್ಕ ವಸಿಷ್ಠಾಶ್ರಮ ವೇದಪಾಠಶಾಲೆಯ ಪ್ರಾಧ್ಯಾಪಕರಾದ ಮತ್ತು ಅದ್ವೈತವೇದಾಂತಪಾರಂಗತರೂ, ಅಖಿಲ ಸಖಿಲವೇದಶಾಸ್ತ್ರ ಪುರಾಣಾದಿಸದ್ಗ್ರಂಥಗಳ ತತ್ವವೇತ್ತರೂ, ಸದಾಚಾರಸಂಪನ್ನರೂ, ವಿದ್ವಜ್ಜನರಿಗೆ ಆದರ್ಶಪ್ರಾಯರೂ, ಆಗಿರುವ ಬ್ರಹ್ಮಶ್ರೀ ಕೋಣನ್ಮೆ ಮಹಾಲಿಂಗ ಶಾಸ್ತ್ರಿಗಳವರ ಸ್ವಾಭಿಪ್ರಾಯಗಳು —

ಉಕ್ಕಿನಡ್ಕ ಸಂಸ್ಕೃತಪಾಠಶಾಲಾಯಾಂ ಸಂಸ್ಕೃತಾಧ್ಯಾಪಕೈಸ್ತತ್ರ ಭವದ್ಭಿ ರ್ವೆಂಕಟೇಶ ಶರಳಾಯಾಖ್ಯೈ ರ್ವಿದ್ವದ್ಭಿರ್ವಿರಚಿತೋಽಯಮೌರ್ಧ್ವದೈಹಿಕ-ಸಂಸ್ಕಾರ ಪ್ರಯೋಗಾಖ್ಯೋಗ್ರನ್ಥಸ್ಸಮಗ್ರಂ ಸಮ್ಯಗವಾಲೋಕಿ । ಅತ್ರಾಽಶ್ವ ಲಾಯನಾನಾಂ ಗ್ರನ್ಥಾನ್ತರಾಪೇಕ್ಷಾಮನ್ತರೇಣಾಪಿ ಅನುಷ್ಠೇಯ ಪದಾರ್ಥಾನ್ ಕರ್ತುಂ ಕಾರಯಿತುಂ ಚಾಸ್ತ್ಯಾನುಕೂಲ್ಯಂ । ಯತೋಽಹ್ಯತ್ರ ಮೂಲಭೂತ-ಸ್ಮೃತಿವಾಕ್ಯಾನಿ, ಬ್ರಹ್ಮಕರ್ಮಸಮುಚ್ಚಯಾದಿ ಗ್ರಂಥಾಂತರ ವಚನಾನಿ ಚೋ-ದಾಹೃತ್ಯ ಸ್ಪಷ್ಟಪ್ರತಿಪತ್ತಯೇ ಕರ್ಣಾಟಕಭಾಷಾಯಾಂ ವಿಪರಿಣಮ್ಯ ಅನ್ಯೂನಾ ತಿರಿಕ್ತಮನುಷ್ಠಾನಕ್ರಮೋ ನಿರೂಪಿತಃ । ತಸ್ಮಾತ್ ಪ್ರಾಯೇಣಾನಧಿಗತ ಸಂಸ್ಕೃತಾನಾಮಪ್ಯಸ್ತ್ಯತ್ರ ಪ್ರವೇಶ ಇತ್ಯತ್ರ ನ ಕ್ವಾಪಿ ವಿಪ್ರತಿಪತ್ತಿಃ ॥

ಗ್ರಂಥಸ್ಯಾಸ್ಯ ಮುದ್ರಣೇನ ಪ್ರಚುರಪ್ರಚಾರಣೇನಚ ಗ್ರಂಥಕರ್ತ್ರೂಣಾಂ ಶ್ರಮಸ್ಸಫಲೀಭವಿಷ್ಯತೀತಿ ಸುದೃಢಂ ವಿಶ್ವಸಿಮಿ । ಕಿಂಚೈತದ್ಗ್ರಂಥ ಕರ್ತ್ರೂಣಾ ಮೇತಾದೃಶ ಗ್ರಂಥಾಂತರಗ್ರಥನಶಕ್ತಿಂ ಶರೀರಾಯುರಾರೋಗ್ಯೈಶ್ವರ್ಯಾದಿಕಂ ಚಾನುಗೃಹ್ಣಾತು ಸರ್ವೇಶ್ವರೋಭಗವಾನಿತಿ ತಂ ಪ್ರಾರ್ಥಯೇ ॥

॥ ಇತಿ ಸ್ವಾಭಿಪ್ರಾಯಮಾವಿಷ್ಕರೋತಿ ॥

ವಸಿಷ್ಠಾಶ್ರಮವೇದಪಾಠಶಾಲಾಧ್ಯಾಪಕಃ

ಪುಷ್ಯಕೃಷ್ಣೈಕಾದಶೀ
ಸಂ॥ ಮನ್ಮಥಃ

**ಕೆ. ಮಹಾಲಿಂಗಭಟ್ಟಃ**

# -: ವಿಷಯಾನುಕ್ರಮಣಿಕೆ :-



ಕ್ರ.ಸಂಖ್ಯೆ ಪುಟ.ಸಂಖ್ಯೆ

---

## ಪರಿಶಿಷ್ಟ

---


ಪ್ರತಿಗಳು ದೊರೆಯುವ ಸ್ಥಳ :

**ಮಧೂರು ವೆಂಕಟೇಶ ಶರಳಾಯ,**

ಸಂಸ್ಕೃತ ಸಾಹಿತ್ಯ ಶಿರೋಮಣಿ ವಿದ್ವಾನ್,

**ಕಾರ್ನೇಲ್ ಹೈಸ್ಕೂಲ್, ಮಂಡ್ಯ.**

# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೦ | ೧೮ | ನಾನಾ | ನಾನಾ |
| ೧೦ | ೧೯ | ಪರಿಸ್ರವ | ಪರಿಸ್ರುವ |
| ೧೨ | ೧೦ | ಬ್ರದ್ನಸ್ಯ | ಬ್ರಧ್ನಸ್ಯ |
| ೧೬ | ೧೪ | ಊರ್ಧ್ವೋಽಚಿ | ಊರ್ಧ್ವೋಽಚ್ಛ್ರಿ |
| ೧೭ | ೧ | ಪೂರ್ವಕಂ | ( ಬಿಟ್ಟುಬಿಡುವುದು |
| ೨೯ | ೨೧ | ಅವೃತಾ | ಅವೃತಾ |
| ೩೩ | ೨ | ಬೋಽಧ್ಯೈರು | ಬೋಽಧ್ಯೈರು |
| ೩೩ | ೪ | ರಾತಿಷಾಚಃ | ರಾತಿಷಾಚಃ |
| ೩೫ | ೧೦ | ವೃತಾತ್ | ವೃತಾತ್ |
| ೩೬ | ೨೪ | ಸೂಟೆಯನು | ಸೂಟೆಯನ್ನು |
| ೩೭ | ೨೦ | ವ್ರೇಽಶಾನಃ | ಪ್ರೇಽತಾನು |
| ೩೯ | ೩ | ಗಚ್ಛ | ಗಚ್ಛ |
| ೩೯ | ೩ | ಭಾಗಸ್ತ್ರಪಸಾ | ಭಾಗಸ್ತ್ರಪಸಾ |
| ೪೮ | ೧೮ | ಆದ್ಯೈಽಹನಿ | ಆದ್ಯೈಽಹನಿ |
| ೫೭ | ೨೩ | ಪಥಮ | ಪ್ರಥಮ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೬೦ | ೧೧ | | ( ಹೋಮಿಸಲಿಕ್ಕಿರುವ ಮಂತ್ರ ) |
| ೬೪ | ೧ | ಸ್ಪರ್ಪವಾಗಿದ್ದರೆ | ಸ್ಪರ್ಶವಾಗಿದ್ವರೆ |
| ೬೮ | ೧೬ | ಷಿಷ | ಷಿಷ್ಟ |
| ೬೮ | ೧೮ | ಮೂದಲಾದ | ಮೊದಲಾದ |
| ೬೯ | ೧೩ | ತೂಷಿಯಲ್ಲಿ | ತೂಷ್ಣಿಯಲ್ಲಿ |
| ೭೧ | ೧೪ | ಮತನ | ಮೃತನ |
| ೮೪ | ೪ | ಬಿಭ್ರತಃ | ಬಿಭ್ರತಃ । |
| ೮೭ | ೮ | ಅಸ್ಥರ್ಭಿರ್ವೃತ್ರಾ | ಅಸ್ಥಭಿರ್ವೃತ್ರಾ |
| ೯೦ | ೧ | ಮಂತ್ರಾಗ್ತಿ | ಮಂತ್ರಾಗ್ನಿ |
| ೯೦ | ೯ | ಅನಾದಿನಿಫನೋ | ಅನಾದಿನಿಧನೋ |
| ೯೦ | ೧೧ | ಭವಂ ಊನು | ಭವಂತೋऽನು |
| ೯೦ | ೧೧ | ಎರಡೇ | ಎರಡು |
| ೯೩ | ೧೯ | ಜ್ಯೋತಿರಸಿ | ಜ್ಯೋತಿರಸಿ |
| ೯೭ | ೮ | ಹವಿರ್ಬಿಃ | ಹವಿರ್ಭಿಃ |
| ೧೦೩ | ೯ | ಅದನ್ನ | ಅದನ್ನು |
| ೧೧೦ | ೧೭ | ಗೊದಾನವನ್ನೂ | ಗೋದಾನವನ್ನೂ |

" ಮಹೇ ಶೂರಾಯ ವಿಷ್ಣವೇ ಚಾರ್ಚತ "



|| ಶ್ರೀಃ ||



ಲಕ್ಷ್ಮೀನಾರಾಯಣಾಭ್ಯಾಂ ನಮಃ

# || ಔರ್ಧ್ವದೈಹಿಕ ಪ್ರಯೋಗವು ||

ಸತ್ಕರ್ಮಸ್ವೀಕತಾನೇಭ್ಯ ಸ್ಸದ್ಯಃ ಕೈವಲ್ಯದೋ ಹಿ ಯಃ ।
ಪಾಪಘ್ನಂ ತಂ ಮಹಾವಿಷ್ಣುಂ ತ್ರಯೀವೇದ್ಯಂ ಚಿರಂ ನುಮಃ ॥

## ತನ್ನ ಪ್ರಾಣೋತ್ಕ್ರಮಣ ಕಾಲದಲ್ಲಿ ತಾನೇ ಮಾಡಬೇಕಾದ ಕರ್ತವ್ಯಗಳು

ಮುಮುಕ್ಷುವಾದವನು ತನ್ನ ಮರಣಕಾಲ ಸಮೀಪಿಸಿದುದನ್ನು ತಿಳಿದು ಕೂಡಲೇ ಶುಚಿರ್ಭೂತನಾಗಿ ಆಚಮನವನ್ನು ಮಾಡಿ ಪವಿತ್ರ ಧರಿಸಿ ಅಭಿವಾದನವನ್ನು ಮಾಡಿ, ಶಿವಾದಿ ಶ್ರೀಗುರುಭ್ಯೋ ನಮಃ ಗುಂಗುರುಭ್ಯೋ ನಮಃ — ಇತ್ಯಾದಿ ಆಯಾಸ್ಥಾನಗಳಲ್ಲಿ ವಂದಿಸಿ ಪ್ರಾಣಾಯಾಮ ಮಾಡಿ,

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧುಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

ಎಂದು ಜಲಶುದ್ಧಿಯನ್ನು ಮಾಡಿ ಕೈಯಲ್ಲಿ ದರ್ಭಾಕ್ಷತಗಳನ್ನು ಹಿಡಿದು ನೀರೆರೆದು

ಓಂ ಸ್ವಸ್ತಿ ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋ ರಾಜ್ಞಯಾ ಪ್ರವರ್ತಮಾನಸ್ಯಾದ್ಯ ಬ್ರಹ್ಮಣೋ ದ್ವಿತೀಯಪರಾರ್ಧೇ ಶ್ವೇತ ವರಾಹಕಲ್ಪೇ

ವೈವಸ್ವತಮನ್ವಂತರೇ ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭಾರತವರ್ಷೇ ಭರತಖಂಡೇ ಮೇರೋರ್ದಕ್ಷಿಣಪಾರ್ಶ್ವೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣಕೂಲೇ ಶಾಲೀವಾಹನಶಕೇ ಬೌದ್ಧಾವತಾರೇ ಪರಶುರಾಮ ಕ್ಷೇತ್ರೇ... ( ... .. ... .. ... ... ಕ್ಷೇತ್ರೇ ) ಪಶ್ಚಿಮಸಮುದ್ರತೀರೇ (........... .. ... ತೀರೇ ) ಗೋಕರ್ಣಮಂಡಲೇ ( .. ...ಮಂಡಲೇ) ಗೋರಾಷ್ಟ್ರದೇಶೇ (.... ...ದೇಶೇ) ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಪ್ರಭವಾದಿಷಷ್ಟಿಸಂವತ್ಸರಾಣಾಂ ಮಧ್ಯೇ........ಸಂವತ್ಸರೇ .... .......ಅಯನೇ ........ಅರ್ಕೇ .......ಋತೌ .... ...ಮಾಸೇ ........ಪಕ್ಷೇ .... .......ತಿಥೌ ............ವಾಸರಯುಕ್ತಾಯಾಂ ಪುಣ್ಯಾಯಾಂ ಪುಣ್ಯನಕ್ಷತ್ರ ಪುಣ್ಯಯೋಗ ಪುಣ್ಯಕರಣಾದ್ಯೇವಂ ಗುಣವಿಶೇಷಣವಿಶಿಷ್ಟಾಯಾಂ ಪುಣ್ಯತಿಥೌ ಅಸ್ಮಾಕಂ ಸಕುಟುಂಬಾನಾಂ ಕ್ಷೇಮಸ್ಥೈರ್ಯವಿಜಯಾಭಯಾನಂದಾಯು ರಾರೋಗ್ಯೈಶ್ವರ್ಯಾಭಿವೃಧ್ಯರ್ಥಂ ಧರ್ಮಾರ್ಥಕಾಮ ಮೋಕ್ಷ ಚತುರ್ವಿಧ ಫಲ ಪುರುಷಾರ್ಥಸಿಧ್ಯರ್ಥಂ ವಿಶೇಷತಃ . ಗೋತ್ರಸ್ಯ ........ಶರ್ಮಣೋ ಮಮ ಜನ್ಮಪ್ರಭೃತ್ಯದ್ಯಯಾವತ್ ಜ್ಞಾನಾಜ್ಞಾನ ಕಾಮಾಕಾಮ ಸಕೃದಸ ಕೃತ್ಕೃತಕಾಯಿಕ ವಾಚಿಕ ಮಾನಸಿಕ ಸಾಂಸರ್ಗಿಕ ಸ್ಪೃಷ್ಟಾಸ್ಪೃಷ್ಟ ಭುಕ್ತಾಭುಕ್ತ ಪೀತಾಪೀತ ಸಕಲಪಾತಕಾತಿಪಾತಕೋಪಪಾತಕ ಲಘುಪಾತಕ ಸಂಕಲೀಕರಣ ಮಲಿನೀಕರಣಾಪಾತ್ರೀಕರಣ ಜಾತಿಭ್ರಂಶಕರ ಪ್ರಕೀರ್ಣ ಪಾತಕಾನಾಂ ನಿರಸನಪೂರ್ವಕಂ ಮಮ ಸುಖೇನ ಪ್ರಾಣೋತ್ಕ್ರಮಣ ಪ್ರತಿ ಬಂಧಕೋಕ್ತನಿಷ್ಕೃತ್ಯನುಕ್ತನಿಷ್ಕೃತಿ ಸಕಲಪಾತಕ ಕ್ಷಯದ್ವಾರಾ ಪರ ಲೋಕೇ ಶಾಶ್ವತ ಸುಖಾನುಭವಸಿಧ್ಯರ್ಥಂ ಪಾಪಾಪಹ ಶ್ರೀ ಮಹಾವಿಷ್ಣು ಪ್ರೀತ್ಯರ್ಥಂ ಚ ತದುಕ್ತದಾನಾನಿ ಕರ್ತುಂ ಬ್ರಾಹ್ಮಣ ಪೂಜಾಂಕರಿಷ್ಯೇ ||

ಎಂದು ಸಂಕಲ್ಪಿಸಬೇಕು. ಅನಂತರ ಐದು ಜನ ಬ್ರಾಹ್ಮಣರನ್ನು ಆಮಂತ್ರಿಸಿ ವಸ್ತ್ರೋತ್ತರೀಯಾಭರಣಗಂಧಾದಿಗಳಿಂದ ವಿಧಿವತ್ ಪೂಜಿಸಿ ವತ್ಸ ( ಕರು )

ಸಹಿತ ಐದು ಗೋವುಗಳನ್ನು ಕೂಡ ವಸ್ತ್ರೋತ್ತರೀಯಾಭರಣಗಳಿಂದ ಪೂಜಿಸಿ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ಬ್ರಾಹ್ಮಣರಿಗೆ

ತಾಂಬೂಲಂ ಶ್ರೀಕರಂ ಭದ್ರಂ ಬ್ರಹ್ಮವಿಷ್ಣು ಶಿವಾತ್ಮಕಂ !
ತಸ್ಮಾದಸ್ಯ ಪ್ರದಾನೇನ ಶಾಂತಿಂ ದೇಹಿ ದ್ವಿಜೋತ್ತಮ ||

ಎಂದು ತಾಂಬೂಲವನ್ನು ಕೊಟ್ಟು ಪಾಪಧೇನುದಾನವನ್ನು ಮಾಡಬೇಕು.

## ಪಾಪಧೇನು ದಾನ

ಆಜನ್ಮೋಪಾರ್ಜಿತಂ ಪಾಪಂ ಮನೋವಾಕ್ಕಾಯಕರ್ಮಭಿಃ |
ತತ್ಸರ್ವಂ ನಾಶಮಾಯಾತು ಪಾಪಧೇನುಪ್ರದಾನತಃ ||

ಮಮ ಮನೋವಾಕ್ಕಾಯಕರ್ಮಭಿಃ ಆಜನ್ಮೋಪಾರ್ಜಿತ ಪಾಪಾಪನೋದನ ಕಾಮೋಽಹಂ ಇಮಾಂ ಕೃಷ್ಣಾಂ ಪಾಪಾಪನೋದನಧೇನುಂ ಯಥಾಶಕ್ತಿಸೋಪಸ್ಕರಾಂ ರುದ್ರದೈವತ್ಯಾಂ.... ...ಗೋತ್ರಾಯ ... ..ಶರ್ಮಣೇ ತುಭ್ಯಂ ಸಂಪ್ರದದೇ ದತ್ತಂ ನ ಮಮ |

ಎಂದು ಗೋಪುಚ್ಛಹಿಡಿದು ಧಾರೆಯೆರೆದು,

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ !
ಅನಂತಪುಣ್ಯಫಲದಮತಶ್ಶಾಂತಿಂ ಪ್ರಯಚ್ಛ ಮೇ ||

ಎಂದು ದಕ್ಷಿಣೆಯನ್ನು ಕೂಡ ಕೊಟ್ಟು,

ಸತಾಂಬೂಲ ಸದಕ್ಷಿಣಾಕ ಪಾಪಾಪನೋದನಧೇನುಪ್ರದಾನೇನ ಮಮ ಸಮಸ್ತೈನೋ ನಿಬರ್ಹಣಮಸ್ತ್ವಿತಿ ಭವಂತೋಽನುಗೃಹ್ಣಂತು |

ಎಂದು ನಮಸ್ಕರಿಸಿ, ಬ್ರಾಹ್ಮಣನಿಂದ

"ಸಮಸ್ತೈನೋ ನಿಬರ್ಹಣಮಸ್ತು"

ಎಂದಾಶೀರ್ವಾದವನ್ನು ಪಡೆದು ಉತ್ಕ್ರಾಂತಿಧೇನುದಾನವನ್ನು ಮಾಡಬೇಕು.

## ಉತ್ಕ್ರಾಂತಿಧೇನು ದಾನ

ಅಸೂತ್ಕ್ರಾಂತೌ ಪ್ರವೃತ್ತಸ್ಯ ಸುಖೋತ್ಕ್ರಮಣಸಿದ್ಧಯೇ !
ತುಭ್ಯಮೇನಾಂ ಸಂಪ್ರದದೇ ಧೇನುಮುತ್ಕ್ರಾಂತಿಸಂಜ್ಞಿಕಾಂ ||

ಮಮ ಸುಖೇನ ಪ್ರಾಣೋತ್ಕ್ರಮಣ ಪ್ರತಿಬಂಧಕೋಕ್ತನಿಷ್ಕೃತ್ಯನುಕ್ತನಿಷ್ಕೃತಿಜನಿತ ಸಕಲಪಾಪಕ್ಷಯದ್ವಾರಾ ಸುಖೇನ ಪ್ರಾಣೋತ್ಕ್ರಮಣಸಿಧ್ಯರ್ಥಂ ಇಮಾಮುತ್ಕ್ರಾಂತಿ ಸಂಜ್ಞಿಕಾಂ ಧೇನುಂ ಯಥಾಶಕ್ತಿಸೋಪಸ್ಕರಾಂ ರುದ್ರದೈವತ್ಯಾಂ. .. ...ಗೋತ್ರಾಯ ... ..ಶರ್ಮಣೇ ತುಭ್ಯಮಹಂ ಸಂಪ್ರದದೇ ದತ್ತಂ ನ ಮಮ ||

ಎಂದು ಮೊದಲಿನಂತೆ ಗೋಪುಚ್ಛಹಿಡಿದು ಧಾರೆಯೆರೆದುಕೊಟ್ಟು ದಕ್ಷಿಣೆಯನ್ನೂ ಕೊಟ್ಟು ನಮಸ್ಕರಿಸಿ,

ಸತಾಂಬೂಲಸದಕ್ಷಿಣಾಕೋತ್ಕ್ರಾಂತಿಧೇನುದಾನೇನ ಮಮ ಸುಖೇನ ಪ್ರಾಣೋತ್ಕ್ರಮಣ ಸಿದ್ಧಿರಸ್ತ್ವಿತಿ ಭವಂತೋಽನುಗೃಹ್ಣಂತು |
ಎಂದು ಹೇಳಿ, ಬ್ರಾಹ್ಮಣನಿಂದ

"ತವ ಸುಖೇನ ಪ್ರಾಣೋತ್ಕ್ರಮಣ ಸಿದ್ಧಿರಸ್ತು"

ಎಂದಾಶೀರ್ವಾದವನ್ನು ಪಡೆದು ವೈತರಣೀಧೇನುದಾನವನ್ನು ಮಾಡಬೇಕು.

## ವೈತರಣೀಧೇನು ದಾನ

ವಿಷ್ಣುರೂಪ ದ್ವಿಜಶ್ರೇಷ್ಠ ಭೂದೇವ ಗತಿಪಾವನ |
ತರ್ತುಂ ವೈತರಣೀಮೇತಾಂ ಕೃಷ್ಣಾಂ ಗಾಂ ಪ್ರದದಾಮ್ಯಹಂ ||
ಧೇನುಕೇ ತ್ವಂ ಪ್ರತೀಕ್ಷಸ್ವ ಯಮದ್ವಾರೇ ಮಹಾಪಥೇ |
ಉತ್ತಿತೀರ್ಷುರಯಂ ದೇವಿ ವೈತರಣ್ಯೈ ನಮೋಽಸ್ತು ತೇ ||
ಯಮದ್ವಾರಪಥೇ ಘೋರೇ ಘೋರಾ ವೈತರಣೀನದೀ |
ತರ್ತುಂ ತಾಮಿಹ ಯಚ್ಛಾಮಿ ಕೃಷ್ಣಾಂ ವೈತರಣೀಂತುಗಾಂ ||

ಮಮ ಯಮದ್ವಾರಸ್ಥಿತ ವೈತರಣ್ಯಾಖ್ಯ ನದ್ಯುತ್ತಾರಣಾರ್ಥಂ ಇಮಾಂ ಕೃಷ್ಣಾಂ ಸವತ್ಸಾಂ ಗಾಂ ಕೃಷ್ಣವಸ್ತ್ರಯುಗಚ್ಛನ್ನಾಂ ಸಪ್ತಧಾನ್ಯ ಯುತಾಂ ರಕ್ತಮಾಲ್ಯಾದ್ಯಲಂಕೃತಾಂ ಯಥಾಶಕ್ತಿ ಸ್ವರ್ಣಶೃಂಗಾದ್ಯುಪಸ್ಕರೋಪೇತಾಂ ರುದ್ರದೈವತ್ಯಾಂ ... ...ಗೋತ್ರಾಯ........ಶರ್ಮಣೇ ತುಭ್ಯಂ ಸಂಪ್ರದದೇ ದತ್ತಂ ನ ಮಮ |

ಎಂದು ಧಾರೆಯೆರೆದು ಗೋದಾನವನ್ನು ಮಾಡಿ ದಕ್ಷಿಣೆಯನ್ನು ಕೊಟ್ಟು,

"ಸತಾಂಬೂಲ ಸದಕ್ಷಿಣಾಕ ವೈತರಣೀಧೇನುದಾನೇನ ಮಮ ಯಮ ದ್ವಾರಸ್ಥಿತ ವೈತರಣ್ಯಾಖ್ಯ ನದ್ಯುತ್ತಾರಣಮಸ್ತ್ವಿತಿ ಭವಂತೋಽನುಗೃಹ್ಣಂತು" ಎಂದು ನಮಸ್ಕರಿಸಿ,

"ತವ ವೈತರಣೀ ನದ್ಯುತ್ತಾರಣಮಸ್ತು"

ಎಂಬಾಶೀರ್ವಾದವನ್ನು ಪಡೆಯಬೇಕು.

## ಋಣಧೇನು ದಾನ

ಐಹಿಕಾಮುಷ್ಮಿಕಂ ಯಚ್ಚ ಸಪ್ತಜನ್ಮಾರ್ಜಿತಂತ್ವೃಣಂ ।
ತತ್ಸರ್ವಂ ಶುದ್ಧಿಮಾಯಾತು ಗಾಮೇಕಾಂ ದದತೋ ಮಮ ॥

ಮಮ ಐಹಿಕಾಮುಷ್ಮಿಕ ಸಪ್ತಜನ್ಮಾರ್ಜಿತರ್ಣಪರಿಹಾರಾರ್ಥಂ ಯಥಾಶಕ್ತ್ಯಲಂಕೃತಾಂ ಸವತ್ಸಾಮಿಮಾಂ ಗಾಂ ರುದ್ರದೈವತ್ಯಾಂ ..... ....ಗೋತ್ರಾಯ .....ಶರ್ಮಣೇ ತುಭ್ಯಂ ಸಂಪ್ರದದೇ ದತ್ತಂ ನ ಮಮ ।

ಎಂದು ಹೇಳಿ ಗೋದಾನವನ್ನು ಮಾಡಿ ತಾಂಬೂಲ ದಕ್ಷಿಣೆಗಳನ್ನು ಕೊಟ್ಟು,

ಸತಾಂಬೂಲ ಸದಕ್ಷಿಣಾಕರ್ಣಧೇನುದಾನೇನ ಮಮ ಸಪ್ತಜನ್ಮಾರ್ಜಿತರ್ಣಪಾತಕಪರಿಹಾರೋಽಸ್ತ್ವಿತಿ ಭವಂತೋಽನುಗೃಹ್ಣಂತು । ಎಂದು ಹೇಳಿ,

"ಸಮಸ್ತರ್ಣ ಪಾತಕ ಪರಿಹಾರೋಽಸ್ತು"

ಎಂದಾಶೀರ್ವಾದವನ್ನು ಪಡೆದು,

## ಮೋಕ್ಷಧೇನು ದಾನ

ಮೋಕ್ಷದೋ ವಾಸುದೇವಸ್ತು ವೇದಶಾಸ್ತ್ರೇಷು ಗೀಯತೇ ।
ತತ್ಪ್ರೀತಯೇ ದ್ವಿಜಾಗ್ರ್ಯಾಯ ಮೋಕ್ಷಧೇನುಂದದಾಮ್ಯಹಂ ॥

ಸಂಸಾರ ಮೋಕ್ಷಾವಾಪ್ತಿಕಾಮೋಽಹಂ ಮಹಾವಿಷ್ಣುಪ್ರೀತ್ಯರ್ಥಂ ಇಮಾಂ ಮೋಕ್ಷಧೇನುಂ ಯಥಾಶಕ್ತಿಸೋಪಸ್ಕರಾಂ ರುದ್ರದೈವತ್ಯಾಂ ...........

. ......ಗೋತ್ರಾಯ ...ಶರ್ಮಣೇ ತುಭ್ಯಂ ಸಂಪ್ರದದೇ ದತ್ತಂ ನ ಮ ಮ ।

ಎಂದು ಮೊದಲಿನಂತೆ ದನವನ್ನು ಕೊಟ್ಟು ತಾಂಬೂಲ ದಕ್ಷಿಣೆಗಳನ್ನೂ ಕೊಟ್ಟು,

ಸತಾಂಬೂಲಸದಕ್ಷಿಣಾಕ ಮೋಕ್ಷಧೇನುದಾನೇನ ಮಮ ಸಂಸಾರ ಮೋಕ್ಷಾರ್ಥಂ ಮಹಾವಿಷ್ಣುಸ್ಸುಪ್ರೀತೋಽಸ್ತ್ವಿತಿ ಭವಂತೋಽನುಗೃಹ್ಣಂತು, ಎಂದು ಹೇಳಿ,

" ತವ ಸಂಸಾರಮೋಕ್ಷಾರ್ಥಂ.. ಮಹಾವಿಷ್ಣುಸ್ಸುಪ್ರೀತೋಽಸ್ತು " ಎಂದಾಶೀರ್ವಾದವನ್ನು ಪಡೆಯಬೇಕು. ಹೀಗೆ ಪಂಚಗೋದಾನಗಳನ್ನು ಮಾಡಿ, ಪುನಃ ಹತ್ತು ಬ್ರಾಹ್ಮಣರಿಗೆ,

" ಗಂಧಾದಿ ಸಕಲಾರಾಧನೈಃ ಸ್ವರ್ಚಿತಂ "

ಎಂದು ಪೂಜೆಮಾಡಿ* ದಶದಾನಗಳನ್ನು ಮಾಡಬೇಕು.

## ಗೋದಾನ

ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ತಸ್ಮಾ ಚ್ಛಿವಂ ಮೇ ಸ್ಯಾದಿಹಲೋಕೇ ಪರತ್ರ ಚ ॥

## ಭೂಮಿ ದಾನ

ಸರ್ವಸಸ್ಯಾಶ್ರಯಾ ಭೂಮಿರ್ವರಾಹೇಣ ಸಮುದ್ಧೃತಾ ।
ಅನಂತಸಸ್ಯಫಲದಾಹ್ಯತಶ್ಶಾಂತಿಂ ಪ್ರಯಚ್ಛ ಮೇ ॥

## ತಿಲ ದಾನ

ಮಹರ್ಷೇರ್ಗೋತ್ರ ಸಂಭೂತಾಃ ಕಶ್ಯಪಸ್ಯ ತಿಲಾಃ ಸ್ಮೃತಾಃ !
ತಸ್ಮಾದೇಷಾಂ ಪ್ರದಾನೇನ ಮಮ ಪಾಪಂ ವ್ಯಪೋಹತು ॥

## ಹಿರಣ್ಯ ದಾನ

ಹಿರಣ್ಯಗರ್ಭಗರ್ಭ........ಶ್ಶಾಂತಿಂ ಪ್ರಯಚ್ಛ ಮೇ ॥

*ದನ, ಭೂಮಿ, ಎಳ್ಳು, ಹಿರಣ್ಯ, ತುಪ್ಪ, ವಸ್ತ್ರ, ಧಾನ್ಯ, ಬೆಲ್ಲ, ಬೆಳ್ಳಿ, ಉಪ್ಪು.

## ಆಜ್ಯ ದಾನ

ಕಾಮಧೇನೋಸ್ಸಮುದ್ಭೂತಂ ಸರ್ವಕ್ರತುಷು ಸಂಸ್ಥಿತಂ ।
ದೇವಾನಾಮಾಜ್ಯಮಾಹಾರಮತಶ್ಶಾಂತಿಂ ಪ್ರಯಚ್ಛ ಮೇ ॥

## ವಸ್ತ್ರ ದಾನ

ಶೀತವಾತೋಷ್ಣ ಸಂತ್ರಾಣಂ ಲಜ್ಜಾಯಾ ರಕ್ಷಣಂ ಪರಂ ।
ದೇಹಾಲಂಕರಣಂ ವಸ್ತ್ರಮತಶ್ಶಾಂತಿಂಪ್ರಯಚ್ಛ ಮೇ ॥

## ಧಾನ್ಯ ದಾನ

ಸರ್ವದೇವಮಯಂ ಧಾನ್ಯಂ ಸರ್ವೋತ್ಪತ್ತಿಕರಂ ನೃಣಾಂ ।
ಪ್ರಾಣಿನಾಂ ಜೀವನೋಪಾಯ ಮತಶ್ಶಾಂತಿಂ ಪ್ರಯಚ್ಛ ಮೇ ॥

## ಗುಡ ದಾನ

ಗುಡಮಿಕ್ಷುರಸೋದ್ಭೂತಂ ಮಂತ್ರಾಣಾಂ ಪ್ರಣವೋ ಯಥಾ ।
ದಾನೇನಾನೇನ ಚೈತಸ್ಯ ಪರಾಲಕ್ಷ್ಮೀಃ ಸ್ಥಿರಾ ಗೃಹೇ ॥

## ರಜತ ದಾನ

ಪ್ರೀತಿರ್ಯತಃ ಪಿತೄಣಾಂ ಚ-ವಿಷ್ಣುಶಂಕರಯೋಸ್ಸದಾ ।
ಶಿವನೇತ್ರೋದ್ಭವಂ ರೌಪ್ಯಮತಶ್ಶಾಂತಿಂ ಪ್ರಯಚ್ಛ ಮೇ ॥

## ಲವಣ ದಾನ

ಯಸ್ಮಾದನ್ನರಸಾಸ್ಸರ್ವೇ ನೋತ್ಕೃಷ್ಟಾ ಲವಣಂ ವಿನಾ ।
ಶಂಭೋಃ ಪ್ರೀತಿಕರಂ ಯಸ್ಮಾದತಶ್ಶಾಂತಿಂ ಪ್ರಯಚ್ಛ ಮೇ ॥

ಹೀಗೆ ತಾಂಬೂಲಗಳೊಂದಿಗೆ ದಶದಾನಗಳನ್ನೂ ದಕ್ಷಿಣೆಗಳನ್ನೂ ಕೊಡಕೊಟ್ಟು

ಸತಾಂಬೂಲ ಸದಕ್ಷಿಣಾಕ ದಶದಾನೈಃ ಮಮ ಸನಸ್ತೈನೋನಿಬರ್ಹಣ ಪೂರ್ವಕಂ ಮಹಾವಿಷ್ಣು ಸಾಯುಜ್ಯಾವಾಪ್ತಿರಸ್ತ್ವಿತಿ ಭವಂತೋಽನುಗೃಹ್ಣಂತು ।

ಎಂದು ಹೇಳಿ ನಮಸ್ಕರಿಸಿ,

" ಮಹಾವಿಷ್ಣುಸಾಯುಜ್ಯಾವಾಪ್ತಿರಸ್ತು "

ಎಂದಾಶೀರ್ವಾದವನ್ನು ಪಡೆಯಬೇಕು. [ ಲೌಕಿಕ ಪದ್ಧತಿಯ ಪ್ರಕಾರ ಜಲದಾನ, ದೀಪದಾನಾದಿಗಳನ್ನೂ ಮಾಡಿದರೆ ಉತ್ತಮ.

## ಜಲ ದಾನ

ವಾರಿಪೂರ್ಣೋ ಘಟಶ್ಚಾಯಂ ದೇವತ್ರಯಮಯೋ ಯತಃ ।
ಪ್ರೀಯತಾಂ ಧರ್ಮರಾಜಸ್ತು ದಾನೇನಾನೇನ ಪುಣ್ಯದಃ ॥

ಎಂದು ತಾಂಬೂಲಗಳೊಂದಿಗೆ ಜಲದಾನವನ್ನು ಮಾಡಿ ದಕ್ಷಿಣೆಕೊಟ್ಟು, ಸತಾಂಬೂಲಸದಕ್ಷಿಣಾಕ ಜಲದಾನೇನ ಮಮ ಪರಲೋಕೇ ತೃಷಾಬಾಧಾ ನಿವಾರಣ ಮಸ್ತ್ವಿತಿ ಭವಂತೋಽನುಗೃಹ್ಣಂತು ।

ಎಂದು ಹೇಳಿ,

" ತೃಷಾಬಾಧಾನಿವಾರಣಮಸ್ತು "

ಎಂದಾಶೀರ್ವಾದವನ್ನು ಪಡೆಯಬೇಕು.

## ದೀಪ ದಾನ

ದಿವ್ಯಂ ಜ್ಞಾನಪ್ರದಂ ಜ್ಯೋತಿರಂಧಕಾರನಿವಾರಣಂ !
ತಸ್ಮಾದಸ್ಯ ಪ್ರದಾನೇನ ಮಮ ಪಾಪಂ ಪ್ರಣಶ್ಯತು ॥

ಎಂದು ದೀಪವನ್ನೂ, ತಾಂಬೂಲದಕ್ಷಿಣೆಗಳನ್ನೂ ಕೊಟ್ಟು,

ಸತಾಂಬೂಲಸದಕ್ಷಿಣಾಕ ದೀಪದಾನೇನ ಮಮ ಪರಲೋಕೇ ಅಂಧಕಾರ ನಿವಾರಣಮಸ್ತ್ವಿತಿ ಭವಂತೋಽನುಗೃಹ್ಣಂತು ।

ಎಂದು ಹೇಳಿ ನಮಸ್ಕರಿಸಿ, " ತಥಾಸ್ತು " ಎಂದಾಶೀರ್ವಾದವನ್ನು ಪಡೆದು, ]

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುಧ್ಯಾತ್ಮನಾವಾಽನುಸೃತೇಸ್ಸ್ವಭಾವಾತ್ । ಕರೋಮಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ । ಓಂ ತತ್ಸತ್ ಮಯಾಕೃತಾನೇನ ದಾನಕರ್ಮಣಾ ಭಗವಾನ್ ಸರ್ವಾತ್ಮಕಶ್ರೀ ಮಹಾವಿಷ್ಣುಃ ಪ್ರೀಯತಾಂ ।

ಎಂದು ಬ್ರಹ್ಮಾರ್ಪಣವನ್ನು ಮಾಡಿ,

ಬ್ರಾಹ್ಮಣೇಭ್ಯೋ ನಮಃ ಯಥಾಸ್ಥಾನಮುದ್ವಾಸಯಾಮಿ ।

ಎಂದು ಬ್ರಾಹ್ಮಣರನ್ನುದ್ವಾಸಿಸಬೇಕು. ಅನಂತರ ( ತನ್ನ ಪ್ರಾಣೋತ್ಕ್ರಮಣಶ್ವಾಸಗತಿಯು ಪ್ರಾರಂಭಿಸಿದ ಮೇಲೆ ) ತಾನು ಕುಳಿತುಕೊಳ್ಳುವ ಸ್ಥಳವನ್ನು ಗೋಮಯದಿಂದ ಲೇಪನಮಾಡಿ ದರ್ಭಾಸನದಲ್ಲಿ ಕುಳಿತು, ಸಾಧ್ಯವಿಲ್ಲದಿದ್ದರೆ ತೆಂಕುತಲೆಯಾಗಿ ಮಲಗಿಕೊಂಡಾದರೂ ತುಳಸೀ, ಗೋಪೀ, ಭಸ್ಮ, ರುದ್ರಾಕ್ಷಿಮೊದಲಾದುವುಗಳಿಂದಲಂಕೃತನಾಗಿ ಪರಮೇಶ್ವರನನ್ನು ಸ್ಮರಿಸಿ ಆಚಮನ ಮಾಡಿ ಪವಿತ್ರ ಧರಿಸಿ ಅಭಿವಾದನವನ್ನೂ

ಶಿವಾದಿ ಶ್ರೀಗುರುಭ್ಯೋ ನಮಃ— ।

ಇತ್ಯಾದಿ ಆಯಾ ಮಂತ್ರಗಳಿಂದಾಯಾಸ್ಥಳಗಳಲ್ಲಿ ವಂದನೆಯನ್ನೂ, ಪ್ರಾಣಾಯಾಮ, ಜಲಶುದ್ಧಿಗಳನ್ನು ಕೂಡ ಮಾಡಿ,

ಓಂ ಸ್ವಸ್ತಿ ಶ್ರೀಮ.... ..ಪುರುಷಾರ್ಥಸಿಧ್ಯರ್ಥಂ . .. ...ಗೋತ್ರಸ್ಯ ........ಶರ್ಮಣೋ ಮಮ ಅಮೃತತ್ವಪ್ರಾಪ್ತ್ಯೇ ಪುಣ್ಯಸೂಕ್ತಾದಿ ಪಠನ ಮಹಂ ಕರಿಷ್ಯೇ ।

ಎಂದು ಸಂಕಲ್ಪಿಸಿ ತನ್ನ ಮಗನ ತೊಡೆಯಲ್ಲಿ ತಲೆಯನ್ನಿಟ್ಟು ಕೆಳಗಿನ, ಮಂತ್ರಗಳನ್ನುಚ್ಚರಿಸಬೇಕು. ಸ್ಮೃತಿಹೀನರಾಗಿ ಅಶಕ್ತರಾಗಿದ್ದ ತಂದೆ ಮೊದಲಾದವರಿಗೂ, ಮತ್ತು ಮರಣೋನ್ಮುಖರಾಗಿರುವ ತಾಯಿ ಮೊದಲಾದ ಸ್ತ್ರೀಯರಿಗಾದರೂ ಮಗನು ಯಾ ಇತರ ಅವನ ಪ್ರತಿನಿಧಿಗಳು ಅವರ ಶಿರಸ್ಸನ್ನು ತನ್ನ ಉತ್ಸಂಗದಲ್ಲಿಟ್ಟು, ಆಚಮನಾದಿಗಳನ್ನು ಮಾಡಿ,

ಮಮ ಪಿತುಃ .......... ಗೋತ್ರಸ್ಯ .. ... . .ಶರ್ಮಣಃ ಅಮೃತತ್ವ ಪ್ರಾಪ್ತ್ಯೇ ಪುಣ್ಯಸೂಕ್ತಾದೀನ್ ಶ್ರಾವಯಿಷ್ಯಾಮಿ ।
(ತಾಯಿ ಮೊದಲಾದವರಿಗಾದರೆ "ಮಮ ಮಾತುಃ" ಎಂದು ಮೊದಲಾಗಿ ಆಯಾ ಸಂಬಂಧಗಳನ್ನು ಹೇಳಿ,

...........ಗೋತ್ರಾಯಾಃ ... ... .ದೇವೀದಾಯಾಃ

ಎಂದು ವಿಶೇಷವನ್ನು ಪ್ರತಿಯೊಂದು ಸಂದರ್ಭದಲ್ಲಿಯೂ ಸೇರಿಸಿಕೊಳ್ಳಬೇಕು.) ಹೀಗೆ ಆಯಾ ಸಂಬಂಧಗೋತ್ರನಾಮಗಳೊಡನೆ ಸಂಕಲ್ಪಿಸಿ, ಮರಣೋನ್ಮುಖರಾದ ತಂದೆ ಮೊದಲಾದವರ ಬಲಕಿವಿಗೆ ಸರಿಯಾಗಿ ಕೇಳುವಂತೆ ಈ ಕೆಳಗಿನ ಮಂತ್ರಗಳನ್ನು ಉಚ್ಚರಿಸಬೇಕು.

## ಕರ್ಣಜಪ ಮಂತ್ರಗಳು

ನಾನಾನಮಿತಿ ಸೂಕ್ತಸ್ಯ ಶಿಶುರಾಂಗಿರಸಃ ಪವಮಾನ ಸ್ಸೋಮಃ ಪಙ್ಕ್ತಿಃ ಮಮ ಪಿತುಃ (ಮಾತ್ರಾದೇರ್ವಾ) ಅಮೃತತ್ವಪ್ರಾಪ್ತ್ಯೇ ಜಪೇ ವಿನಿಯೋಗಃ —

ಓಂ ನಾನಾನಂ ವಾ ಉ ನೊ ಧಿಯೋ ವಿ ವ್ರತಾನಿ ಜನಾನಾಂ । ತಕ್ಷಾ ರಿಷ್ಟಂ ರುತಂ ಭಿಷಗ್ ಬ್ರಹ್ಮಾ ಸುನ್ವಂತ ಮಿಚ್ಛತೀಂ ದ್ರಾಯೇ ನ್ದೋ ಪರಿಸ್ರವ ॥ ೧ ॥ ಓಂ ಜರತೀಭಿ ರೋಷಧೀಭಿಃ ಪರ್ಣೇಭಿ ಶ್ಶಕುನಾನಾಂ । ಕಾರ್ಮಾರೋ ಅಶ್ಮಭಿ ದ್ಯುಭಿ ರ್ಹಿರಣ್ಯವಂತ ಮಿಚ್ಛತೀಂದ್ರಾಯೇನ್ದೋ ಪರಿಸ್ರವ ॥ ೨ ॥ ಓಂ ಕಾರು ರಹಂ ತತೋ ಭಿಷಗುಪಲಪ್ರಕ್ಷಣೀ ನನಾ । ನಾನಾ ಧಿಯೋ ವಸೂಯವೋನುಗಾ ಇವ ತಸ್ಥಿಮೇಂದ್ರಾಯೆಂದೋ ಪರಿಸ್ರವ ॥ ೩ ॥

ಓಂ ಅಶ್ವೋ ವ್ರೋಹ್ವಾ ಸುಖಂ ರಥಂ ಹಸನಾ ಮುಪ ಮಂತ್ರಿಣಃ ।
ಶೇಪೋ ರೋಮಣ್ವಂತೌ ಭೇದೌ ವಾ ರಿ ನ್ಮಂ ಡೂ ಕ ಇಚ್ಛತೀಂದ್ರಾ
ಯೇನ್ದೋ ..... ..... ॥ ೪ ॥ ಓಂ ಶರ್ಯಣಾವತಿ ಸೋಮ ಮಿಂದ್ರಃ
ಪಿಬತು ವೃತ್ರಹಾ । ಬಲಂ ದಧಾನ ಆತ್ಮನಿ ಕರಿಷ್ಯನ್ ವೀರ್ಯಂ ಮಹ
ದಿಂದ್ರಾಯೇಂದೋ ... ...... ॥ ೫ ॥ ಓಂ ಆ ಪವಸ್ವ ದಿಶಾಂಪತ
ಆರ್ಜೀಕಾ ತ್ಸೋಮ ಮೀಢ್ವಃ । ಋ ತ ವಾ ಕೇ ನ ಸತ್ಯೇನ ಶ್ರದ್ಧಯಾ
ತ ಪ ಸಾ ಸುತ ಇಂದ್ರಾಯೇನ್ದೋ .... ....... ॥ ೬ ॥ ಓಂ ಪ ರ್ಜ ನ್ಯ
ವೃದ್ಧಂ ಮಹಿಷಂ ತಂ ಸೂರ್ಯಸ್ಯ ದುಹಿತಾ ಭರತ್ । ತಂ ಗಂಧ
ರ್ವಾಃ ಪ್ರತ್ಯಗೃಭ್ಣ ನ್ತಂ ಸೋಮೇ ರ ಸ ಮಾದಧು ರಿನ್ದ್ರಾಯೇ
ನ್ದೋ ... ... ... ॥ ೭ ॥ ಓಂ ಋತಂ ವದನ್ನೃತದ್ಯುಮ್ನ ಸತ್ಯಂ
ವದನ್ ಸತ್ಯಕರ್ಮನ್ । ಶ್ರದ್ಧಾಂ ವದನ್ ಸೋಮರಾಜನ್ ಧಾತ್ರಾ
ಸೋಮ ಪರಿಷ್ಕೃತ ಇನ್ದ್ರಾಯೇನ್ದೋ .... . . . ॥ ೮ ॥ ಓಂ ಸತ್ಯ
ಮುಗ್ರಸ್ಯ ಬೃಹತ ಸ್ಸಂಸ್ರವಂತಿ ಸಂಸ್ರವಾಃ । ಸಂಯಂತಿ ರ ಸಿ ನೋ
ರಸಾಃ ಪುನಾನೋ ಬ್ರಹ್ಮಣಾ ಹರ ಇನ್ದ್ರಾಯೇನ್ದೋ .......... ॥ ೯ ॥
ಓಂ ಯತ್ರ ಬ್ರಹ್ಮಾ ಪವಮಾನಚ್ಛಂದಸ್ಯಾಂ ವಾಚಂ ವದನ್ ।

ಗ್ರಾವ್ಣಾ ಸೋಮೇ ಮಹೀಯತೇ ಸೋಮೇನಾನಂದಂ ಜನಯನ್ನಿ ನ್ದ್ರಾಯೇನ್ದೋ ......... ‖ ೧೦ ‖ ಓಂ ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಂ । ತಸ್ಮಿನ್ ಮಾಂ ಧೇಹಿ ಪವಮಾನಾ ಮೃತೇ ಲೋಕೇ ಅಕ್ಷಿತ ಇನ್ದ್ರಾಯೇನ್ದೋ .. ... ‖ ೧೧ ‖ ಓಂ ಯತ್ರ ರಾಜಾ ವೈವಸ್ವತೋ ಯತ್ರಾವರೋಧನಂ ದಿವಃ । ಯತ್ರಾಮೂ ರ್ಯಹ್ವತೀರಾಪಸ್ತತ್ರ ಮಾ ಮಮೃತಂ ಕೃಧೀನ್ದ್ರಾಯೇನ್ದೋ ... .. .. ‖ ೧೨ ‖ ಓಂ ಯತ್ರಾನುಕಾಮಂ ಚರಣಂ ತ್ರಿನಾಕೇ ತ್ರಿದಿವೇ ದಿವಃ । ಲೋಕಾ ಯತ್ರ ಜ್ಯೋತಿಷ್ಮಂತಸ್ತತ್ರ ಮಾ ಮಮೃತಂ ಕೃಧೀನ್ದ್ರಾ ಯೇನ್ದೋ ...... . ‖ ೧೩ ‖ ಓಂ ಯತ್ರ ಕಾಮಾನಿ ಕಾಮಾ ಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ । ಸ್ವಧಾ ಚ ಯತ್ರ ತೃಪ್ತಿ ಶ್ಚ ತತ್ರ ಮಾ ಮಮೃತಂ ಕೃಧೀನ್ದ್ರಾಯೇನ್ದೋ.... ..... ‖ ೧೪ ‖ ಓಂ ಯತ್ರಾ ನಂದಾ ಶ್ಚ ಮೋದಾ ಶ್ಚ ಮುದಃ ಪ್ರಮುದ ಆಸತೇ । ಕಾಮಸ್ಯ ಯತ್ರಾಪ್ತಾಃ ಕಾಮಾ ಸ್ತತ್ರ ಮಾ ಮಮೃತಂ ಕೃಧೀನ್ದ್ರಾಯೇನ್ದೋ .......... ‖ ೧೫ ‖ ಓಂ ಯ ಇಂದೋಃ ಪವಮಾನಸ್ಯಾನುಧಾಮಾನ್ಯ ಕ್ರಮೀತ್ । ತ ಮಾಹು ಸ್ಸುಪ್ರಜಾ ಇತಿ ಯ ಸ್ತೇ ಸೋಮಾ ವಿಧನ್ಮನ ಇನ್ದ್ರಾಯೇನ್ದೋ ........... ‖ ೧೬ ‖ ಓಂ ಋಷೇ ಮಂತ್ರ

ಕೃತಾಂ ಸ್ತೋಮೈಃ ಕಶ್ಯಪೋ ದ್ವರ್ಧಯನ್ ಗಿರಃ । ಸೋಮಂ ನಮಸ್ಯ ರಾಜಾನಂ ಯೋ ಜಜ್ಞೇ ವೀರುಧಾಂ ಪತಿ ರಿನ್ದ್ರಾಯೇನ್ದೋ ......... || ೧೭ || ಓಂ ಸಪ್ತ ದಿಶೋ ನಾನಾ ಸೂರ್ಯಾಸ್ಸಪ್ತ ಹೋತಾರ ಋತ್ವಿಜಃ । ದೇವಾ ಆದಿತ್ಯಾ ಯೇ ಸಪ್ತ ತೇಭಿಸ್ಸೋಮಾಭಿರಕ್ಷನ ಇನ್ದ್ರಾಯೇನ್ದೋ ......... || ೧೮ || ಓಂ ಯತ್ತೇ ರಾಜಞ್ಛೃತಂ ಹವಿಸ್ತೇನ ಸೋಮಾಭಿರಕ್ಷ ನಃ । ಅರಾತೀವಾ ಮಾನಸ್ತಾರೀ ನ್ಮೋ ಚ ನಃ ಕಿಂ ಚ ನಾಮಮದಿನ್ದ್ರಾಯೇನ್ದೋ ........... || ೧೯ || ಓಂ ಯತ್ರ ತತ್ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ । ದೇವೈಸ್ಸುಕೃತಕರ್ಮಭಿಸ್ತತ್ರ ಮಾಮಮೃತಂ ಕೃಧೀನ್ದ್ರಾಯೇನ್ದೋ ........... || ೨೦ || ಓಂ ಯತ್ರ ತತ್ಪರಮಾಯ್ಯಂ ಭೂತಾನಾಮಧಿಪತಿಃ । ಭಾವ ಭಾವಿ ಚ ಯೋಗೀ ಚ ತತ್ರ ಮಾಮಮೃತಂ ಕೃಧೀನ್ದ್ರಾಯೇನ್ದೋ ........ || ೨೧ || ಓಂ ಯತ್ರ ಗಂಗಾ ಚ ಯಮುನಾ ಯತ್ರ ಪ್ರಾಚೀ ಸರಸ್ವತೀ । ಯತ್ರ ಸೋಮೇಶ್ವರೋ ದೇವಸ್ತತ್ರ ಮಾಮಮೃತಂ ಕೃಧೀನ್ದ್ರಾಯೇನ್ದೋ ......... || ೨೨ ||

ಹೀಗೆಯೇ ಬೇರೆ ಪುಣ್ಯ ಸೂಕ್ತ, ಉಪನಿಷದಾದಿಗಳನ್ನೂ ಭಾಗವತ, ಗೀತೆ, ವಿಷ್ಣುಸಹಸ್ರ ನಾಮಾದಿಗಳನ್ನೂ ಕೂಡ ಪಾರಾಯಣ ಮಾಡಬೇಕು. ಅಥವಾ ಶ್ರೀರಾಮ, ಶ್ರೀಕೃಷ್ಣ, ನಾರಾಯಣ ನಾಮಗಳನ್ನಾದರೂ ಗಟ್ಟಿಯಾಗಿ ಎಲ್ಲರೂ

ಕೂಡ ಶಂಖಧ್ವಾನದೊಂದಿಗೆ ಪ್ರಾಣೋತ್ಕ್ರಮಣವಾಗುವವರೆಗೆ ಜಪಿಸ ತಕ್ಕದ್ದು. ಪ್ರಾಣೋತ್ಕ್ರಮಣ ಸಮಯದಲ್ಲಿ ಸರ್ವಥಾ ಗಂಗಾ, ತುಳಸೀ, ಶಾಲ ಗ್ರಾಮಾದಿ ತೀರ್ಥಗಳನ್ನು ಆತುರನ ಬಾಯಿಗೆ ಎರೆಯುತ್ತಿರಬೇಕು

## ದಹನದ ವಿಧಿಯು

ಪ್ರಾಣಹೋದ ನಂತರ, ಮಗನು ಯಾ * ಕರ್ಮಾಧಿಕಾರಿಯು ನೆಲದಲ್ಲಿ ಪಸರಿಸಿದ ದರ್ಭೆ, ಎಳ್ಳುಗಳ ಮೇಲೆ ತಂದೆಯ ಶವವನ್ನು ತೆಂಕು ತಲೆಯಾಗಿ ಮಲಗಿಸಿ [ ಆಚಾರ ಪ್ರಕಾರ, ಮಡಿ ವಸ್ತ್ರವನ್ನು ಹೊದಿಸಿ ತಲೆಯ ಹತ್ತಿರ ಬೆಳ್ತಿಗೆ ಅಕ್ಕಿರಾಶಿಯಲ್ಲಿ ತುಪ್ಪದಿಂದಲೂ, ಕಾಲುಗಳ ಹತ್ತಿರ ಭತ್ತದ ರಾಶಿಯಲ್ಲಿ ಎಣ್ಣೆಯಿಂದಲೂ, ನಾಳಿಕೇರ ಖಂಡಗಳಲ್ಲಿ ನೀರಾಜನಗಳನ್ನು ಹಚ್ಚಿಡಬೇಕು ] ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ,

ಓಂ ಸ್ವಸ್ತಿ ಶ್ರೀಮದ್ಭ ... ........ ಸಿದ್ಧ್ಯರ್ಥಂ ( ಪ್ರಾಚೀನಾವೀತೀ ) ( ಯಜ್ಞೋಪವೀತವನ್ನು ಎಡಕ್ಕೈಗೆ ಸಿಲುಕಿಸಿ )

---

### * ಕರ್ತೃನಿರ್ಣಯ

ಔರಸಪುತ್ರ, ಪೌತ್ರ, ಅವನ ಪುರುಷಸಂತತಿ, ಪುತ್ರಿಕಾಪುತ್ರ, ಅವನ ಸಂತತಿ, ಧನಾಧಿಕಾರಿಯಾದ ದೌಹಿತ್ರ, ದೌಹಿತ್ರ, ಪತ್ನೀ, ಪತಿ, ಸಪತ್ನೀ ಪುತ್ರ, ದುಹಿತೃ, ಭ್ರಾತೃ, ಅವನ ಮಗ, ಭಿನ್ನೋದರ ಕನಿಷ್ಠಭ್ರಾತೃ, ಅವನ ಮಗ, ತಂದೆ, ತಾಯಿ, ಸೊಸೆ, ಮಗನ ಮಗಳು, ಮಗಳ ಮಗಳು, ಪೌತ್ರನ ಹೆಂಡತಿ, ಅವನ ಮಗಳು, ಪೌತ್ರನ ಹೆಂಡತಿ, ತಂಗಿ, ತಂಗಿಯ ಮಗ, ಸಪಿಂಡ, ಸೋದಕ, ಮಾತೃಸಪಿಂಡ, ಮಾತೃಸಮಾನೋದಕ, ಸಗೋತ್ರ, ಶಿಷ್ಯ, ಋತ್ವಿಕ್, ಭೃತ್ಯ, ಗುರು, ಆಚಾರ್ಯ, ಸಹಪಾಠಿ, ಜಾಮಾತೃ, ಸ್ನೇಹಿತ, ಸ್ತ್ರೀಹಾರಿ, ಧನಹಾರಿ, ರಾಜ, ಇಷ್ಟು ಜನರು ಯಥಾಕ್ರಮವಾಗಿ ಶಾಸ್ತ್ರೋಕ್ತ ಅಧಿಕಾರಿಗಳು. ಔರಸಪುತ್ರನು ಮಹಾರೋಗಗ್ರಸ್ತ ನಾಗಿ ಅಶಕ್ತನಾಗಿದ್ದರೆ ಮುಖ್ಯಕರ್ಮವಾದ ಕಾಷ್ಠಕ್ಕೆ ಅಗ್ನಿದಾನವನ್ನಾದರೂ ತಾನೇ ಮಾಡಿ ತನ್ನ ಪ್ರತಿನಿಧಿಯಾದ ಬೇರೆಯವನಿಂದ ಇತರ ಕ್ರಿಯೆಗಳನ್ನು ಮಾಡಿಸಬಹುದು.

ಒಬ್ಬನಿಗೆ ಅನೇಕ ಸವರ್ಣ ಸ್ತ್ರೀಯರಲ್ಲಿ ಅನೇಕ ಮಕ್ಕಳು ಹುಟ್ಟಿದ್ದರೆ ಯಾರು ದೊಡ್ಡವನೋ ಅವನೇ ಅಧಿಕಾರಿ. ಹಾಗಿರುವ ತಾಯಂದಿರ ವಿಷಯದಲ್ಲಿ ಇತರ ತಾಯಿಯ ಮಕ್ಕಳಿಗಿಂತ ಕನಿಷ್ಠನಾಗಿದ್ದರೂ ಆಯಾ ತಾಯಿಗೆ ಆಯಾ ಮಗನೇ ಅಧಿಕಾರಿ. ಅವನಿಲ್ಲದಿದ್ದರೆ ಮಾತ್ರ ಇತರ ಮಾತೃಪುತ್ರರಲ್ಲಿ ಜ್ಯೇಷ್ಠನು ಅಧಿಕಾರಿ ಯಾಗುವನು.

...... ಗೋತ್ರಸ್ಯ ...... ಪ್ರೇತಸ್ಯ ( ತಾಯಿಗಾದರೆ, ...... ಗೋತ್ರಾಯಾಃ ....... ದೇವಿದಾಯಾಃ ಪ್ರೇತಾಯಾಃ ) ಅಂಧತ್ವ, ಮೂಕತ್ವ ಬಧಿರತ್ವ ಪೈಶಾಚನಿವೃತ್ತಿಪೂರ್ವಕಪ್ರೇತತ್ವ ವಿಮೋಕ್ಷಾರ್ಥಂ ಔರ್ಧ್ವದೈಹಿಕಂ ಕರ್ಮ ಕರಿಷ್ಯಾಮಿ ( ಉಪವೀತೀ ) ತದಾದೌ ಮಮಾಧಿಕಾರ ಸಿದ್ಧ್ಯರ್ಥಂ ಬ್ರಹ್ಮದಂಡಪ್ರಾಯಶ್ಚಿತ್ತಂ ಕರಿಷ್ಯೇ ।

ಎಂದು ಸಂಕಲ್ಪಿಸಿ ಎಳ್ಳು, ತುಳಸೀ, ದರ್ಭೆಗಳನ್ನು ಸೇರಿಸಿ ಹಿರಣ್ಯವನ್ನು ತೆಗೆದು ಬ್ರಾಹ್ಮಣರಿಗೆ ಮೂರುಸಲ ಪ್ರದಕ್ಷಿಣಬರುತ್ತಾ —

ಆಧಿವ್ಯಾಧಿಹರಂ ನೄಣಾಂ ಮೃತ್ಯುದಾರಿದ್ರ್ಯನಾಶನಂ ।
ಶ್ರೀ ಪುಷ್ಟಿಕೀರ್ತಿದಂ ವಂದೇ ವಿಪ್ರಶ್ರೀ ಪಾದಪಂಕಜಂ ॥

---

ದತ್ತ, ಔರಸ, ಈ ಮಕ್ಕಳಲ್ಲಿ ದತ್ತನು ಜ್ಯೇಷ್ಠನಾಗಿದ್ದರೂ ಕನಿಷ್ಠನಾದ ಔರಸ ಪುತ್ರನೇ ಮುಖ್ಯಾಧಿಕಾರಿಯಾಗುವನು ತಂದೆಗೆ ಪುತ್ರ, ಪೌತ್ರ, ಪ್ರಪೌತ್ರರಿಲ್ಲದಿದ್ದರೆ ಮಾತ್ರ ದತ್ತಪುತ್ರನಿಗೆ ಅಧಿಕಾರ.

ಯಮಳ ಪುತ್ರರಲ್ಲಿಯೂ ಜ್ಯೇಷ್ಠನೇ ಅಧಿಕಾರಿ. ಈ ಜ್ಯೇಷ್ಠ ಕನಿಷ್ಠರ ವಿಷಯದಲ್ಲಿ, ಗರ್ಭವು ಹೊಟ್ಟೆಯಲ್ಲಿರುವಾಗ ಸಮವಾಗಿ ಎರಡು ಪಾರ್ಶ್ವಗಳಲ್ಲಿದ್ದರೆ ಮೊದಲು ಹುಟ್ಟಿದವನು ಜ್ಯೇಷ್ಠನೆಂದೂ, ಮೇಲ್ಕೀಳಾಗಿ ನಿಂತಿದ್ದರೆ ಮೊದಲು ಹುಟ್ಟಿದವನು ಕನಿಷ್ಠನೆಂದೂ ಸ್ಮೃತಿಸಿದ್ಧಾಂತ.

ಗರ್ಭದೀಕ್ಷೆಯಿರುವವನು – ತಂದೆ, ತಾಯಿ, ಮಕ್ಕಳಿಲ್ಲದ ಅಣ್ಣ, ಸೋದರ ಮಾವ, ಮಾತಾಮಹ, ಪಿತೃವ್ಯ, ಶ್ವಶುರ, ಆಚಾರ್ಯ, ಇವರಿಗೂ ಇವರ ಪತ್ನಿಯರಿಗೂ, ಮಾತಾಪಿತೃಗಳ ಮತ್ತು ತನ್ನ ಅಕ್ಕತಂಗಿಯರಿಗೂ, ಕೂಡ ಅಧಿಕಾರಿಯಾಗಿ ಇರುತ್ತಾನಷ್ಟೆ ಹೊರತು ಬೇರೆ ಯಾರಿಗೂ ಕೂಡ ಇವನು ಅನಧಿಕಾರಿ.

ಬ್ರಹ್ಮಚಾರಿಯಾದರೆ – ಮಾತಾಪಿತೃಗಳು, ಮಕ್ಕಳಿಲ್ಲದ ಪಿತಾಮಹ, ಪಿತಾಮಹಿ, ಅಣ್ಣನ ಮಗ, ಗುರು, ಆಚಾರ್ಯ, ಮಾತಾಮಹ, ಮಾತಾಮಹಿ, ಮಾತುಲ, ಅವನ ಪತ್ನಿ, ಚಿಕ್ಕತಂದೆ, ದೊಡ್ಡತಂದೆ, ಇಂತಿಷ್ಟು ಜನರಿಗೆ ಮಾತ್ರ ಅವನು ಅಧಿಕಾರಿಯಾಗುತ್ತಾನೆ. ಇವರನ್ನು ಬಿಟ್ಟು ಬೇರೆಯವರನ್ನು ಅವನು ಸಂಸ್ಕರಿಸಿದರೆ ಅವನಿಗೆ ಪುನರುಪನಯನವಾಗಬೇಕು.

ಅನುಪನೀತನಾದ ಮಗನಿಗೆ ಮೂರು ವರ್ಷ ಕಳೆದಿದ್ದರೆ, ಮಾತಾಪಿತೃಗಳ ಸಂಸ್ಕಾರವನ್ನು ಮಾಡಲು ಅಧಿಕಾರವಿದೆ.

ಎಂದು ಸ್ಮೃತಿವಚನಗಳು ಸಾರುತ್ತವೆ.

ಎಂದು ಹೇಳಿ ಎರಡು ಸಲ ನಮಸ್ಕಾರಮಾಡುತ್ತಾ ಹೇಳಲಿಕ್ಕಿರುವ ಮಂತ್ರ—

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣ ಹಿತಾಯ ಚ ।

ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥

ಎಂದು ನಮಸ್ಕರಿಸಿ, ಭೋ ಬ್ರಾಹ್ಮಣಾಃ ( ಪ್ರಾಚೀನಾವೀತೀ )

......ಗೋತ್ರಸ್ಯ ........ಪ್ರೇತಸ್ಯ ಔರ್ಧ್ವದೈಹಿಕಂ ಕರ್ಮಕರ್ತುಂ ಮಮಾಧಿಕಾರ ಸಂಪದಸ್ತ್ವಿತಿ ಭವಂತೋಽನುಗೃಹ್ಣಂತು ।

ಎಂದು ಪ್ರಾರ್ಥಿಸಿ " ಅಧಿಕಾರಸಂಪದಸ್ತು " ಎಂದು ಬ್ರಾಹ್ಮಣರಿಂದ ಅನುಜ್ಞೆಯನ್ನು ಪಡೆಯಬೇಕು.

ಪ್ರಾಣೋತ್ಕ್ರಮಣ ಕಾಲದಲ್ಲಿ ವಾಂತಿಮಾಡಿ, ಮಲವಿಸರ್ಜಿಸಿ, ಅಸ್ಪೃಶ್ಯರನ್ನು ಮುಟ್ಟಿ, ಮಂಚದಲ್ಲಿ ಮಲಗಿ, ಯಾ ಅಂತರಿಕ್ಷದಲ್ಲಿ ಪ್ರಾಣಹೋದರೆ ಮಾಡಬೇಕಾದ ಪ್ರಾಯಶ್ಚಿತ್ತ—

( ಉಪವೀತೀ ) ಪೂರ್ವೋಚ್ಚರಿತ ಸಂಜ್ಞಕಲ್ಪ ಇವ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಅಸ್ಮ.......... ... ಸಿಧ್ಯರ್ಥಂ ( ಪ್ರಾಚೀನವೀತೀ ) ......... .ಗೋತ್ರಸ್ಯ, ..........ಪ್ರೇತಸ್ಯ ಊರ್ಧ್ವೋಚ್ಛಿಷ್ಟಾ ಧರೋಚ್ಛಿಷ್ಟೋಭಯೋಚ್ಛಿಷ್ಟಾ ಸ್ಪೃಶ್ಯಸ್ಪೃಷ್ಟಾಂತರಾಲ ಮರಣಖಟ್ವಾ ಮರಣಾದಿ ಜನಿತ ಪ್ರತ್ಯವಾಯ ಪರಿಹಾರಾರ್ಥಂ ಪಂಚದಶ, ದ್ವಾದಶ ನವಷಟ್ ತ್ರಿ ಕೃಚ್ಛ್ರಾದ್ಯನ್ಯತಮಕೃಚ್ಛ್ರಾತ್ಮಕಂ ಪ್ರಾಯಶ್ಚಿತ್ತಂ, ಪ್ರತಿಕೃಚ್ಛ್ರಂ ತತ್ಪ್ರತ್ಯಾಮ್ನಾಯ ಗೋನಿಷ್ಕ್ರಯಿಭೂತಯಥಾ ಶಕ್ತಿದ್ರವ್ಯ ದಾನೇನಾಹಮಾಚರಿಷ್ಯಾಮಿ ।

ಎಂದು ಸಂಕಲ್ಪಿಸಿ, ( ಉಪವೀತೀ )

ಅನಾದಿ ನಿಧನೋ ದೇವ ಶಂಖಚಕ್ರ ಗದಾಧರ ।

ಅಕ್ಷಯ್ಯ ಪುಂಡರೀಕಾಕ್ಷ ಪ್ರೇತಮೋಕ್ಷ ಪ್ರದೋಭವ ॥

ಎಂದು ಪ್ರಾಯಶ್ಚಿತ್ತಕ್ಕೆ ಎಳ್ಳು, ತುಳಸೀದಳದ ಸಹಿತ ಸ್ವರ್ಣವನ್ನಿಟ್ಟು

( ಪ್ರಾಚೀನಾವೀತೀ ) ........ಗೋತ್ರಸ್ಯ ............ಪ್ರೇತಸ್ಯ ಊರ್ಧ್ವೋಚ್ಛಿಷ್ಟಾದಿ ಮರಣಸೂಚಿತ ಸಮಸ್ತ ಪ್ರತ್ಯವಾಯ ಪರಿಹಾರ ಪೂರ್ವಕಂ

ಪೂರ್ವಕಂ ದಾಹಾದ್ಯಧಿಕಾರ ಸಿದ್ಧಿರಸ್ತ್ವಿತಿ ಭವಂತೋಽನುಗೃಹ್ಣಂತು ।
ಎಂದು ಪ್ರಾರ್ಥಿಸಿ "ಅಸ್ತು" ಎಂಬ ಅನುಜ್ಞೆಯನ್ನು ಪಡೆಯಬೇಕು.

## ರಾತ್ರಿ ಮೃತನಾಗಿ ಮೂರನೇ ದಿನ ಹಗಲು ಯಾ ಹಗಲು ಮೃತನಾಗಿ ರಾತ್ರಿಯಲ್ಲಿ ದಹನ ಕ್ರಿಯೆಯನ್ನು ಮಾಡಬೇಕಾಗಿ ಬಂದರೆ ಪ್ರಾಯಶ್ಚಿತ್ತ

(ಉಪವೀತೀ) ಅನಾದಿ ನಿಧನೋ ........ ಭವ ॥
ಎಂದು ಮೊದಲಿನಂತೆ ಪ್ರಾಯಶ್ಚಿತ್ತಕ್ಕೆ ಹಿರಣ್ಯವನ್ನಿಟ್ಟು
(ಪ್ರಾಚೀನಾವೀತೀ) ........ಗೋತ್ರಸ್ಯ ........ಪ್ರೇತಸ್ಯ ರಾತ್ರಾವಕೃತ (ಅಥವಾ ದಿವಾऽಕೃತ) ಸಂಸ್ಕಾರ ಜನಿತಪ್ರತ್ಯವಾಯ ಪರಿಹಾರ ಪೂರ್ವಕಂ ದಾಹಾದ್ಯಧಿಕಾರ ಸಿದ್ಧಿರಸ್ತ್ವಿತಿ ಭವಂತೋಽನುಗೃಹ್ಣಂತು ।
ಎಂದು ಪ್ರಾರ್ಥಿಸಿ, "ಅಸ್ತು" ಎಂದನುಜ್ಞೆಯನ್ನು ಪಡೆಯಬೇಕು.

---

## * ಕ್ಷೌರಾದಿ ವಿಚಾರ

ಮಾತಾ ಪಿತೃಗಳ ಹೊರತು ಬೇರೆಯವರ ದಹನಾಂಗ ಕ್ಷೌರವನ್ನು ರಾತ್ರಿಯಲ್ಲಿ ಮಾಡಿಸಬಾರದು. ಕರ್ತೃವು ಆ ರಾತ್ರಿಯಲ್ಲಿಯೇ ದಹನಾನಂತರ ಸಮಯವಿದ್ದರೆ ತಿಲಾಂಜಲ್ಯಾದಿ ನಿತ್ಯಬಲಿಪಿಂಡಾಂತವರೆಗಿನ ಕೆಲಸಗಳನ್ನುಮಾಡಿ ಮರುದಿನ ಬೆಳಗ್ಗೆ ರಾತ್ರಿಪ್ರಾಪ್ತವಾದ ಕ್ಷೌರವನ್ನು ಮಾಡಿಸಿ ನಗ್ನಪ್ರಚ್ಛಾದನ ಮೊದಲಾದ ಶ್ರಾದ್ಧಗಳನ್ನು ಮಾಡಬೇಕು. ಮರುದಿನ ಶುಕ್ರವಾರಾದಿ ದೋಷಗಳಿದ್ದರೆ ಮೃತದಿನದಿಂದ 3, 5, 7, 9, 10 ನೇ ದಿನಗಳಲ್ಲಿ ಯಾವುದಾದರೊಂದು ನಿರ್ದುಷ್ಟವಾದ ದಿವಸ ಕ್ಷೌರವನ್ನು ಮಾಡಿಸಿಕೊಳ್ಳಬೇಕಲ್ಲದೆ ನಗ್ನಪ್ರಚ್ಛಾದನಾದಿಗಳನ್ನು ಮರುದಿನವೇ ಮಾಡಬೇಕು.

ಮಾತಾಪಿತೃಗಳ ವಿಷಯದಲ್ಲಿ, ಮಧ್ಯರಾತ್ರಿಯ ಒಳಗಾದರೆ ರಾತ್ರಿಯಲ್ಲೇ ಕ್ಷೌರವನ್ನು ಮಾಡಿಸಬೇಕು. ದಹನಾನಂತರ ಸಮಯವಿದ್ದರೆ ತಿಲಾಂಜಲ್ಯಾದಿ ನಿತ್ಯ ಬಲಿ ಪಿಂಡಾಂತವರೆಗಿನ ಕ್ರಿಯೆಗಳನ್ನು ಆಗಲೇ ಮಾಡಿ ಮರುದಿನ ನಗ್ನಪ್ರಚ್ಛಾದನಾದಿ ಗಳನ್ನು ಮಾಡಬೇಕು

ಚಿಕ್ಕತಂದೆ, ಚಿಕ್ಕತಾಯಿ, ಅಣ್ಣನ ಹೆಂಡತಿ, ಈ ಮೂರು ಜನರ ಹೊರತು ಬೇರೆ ಯಾರಾದರೂ ಕರ್ತೃವಿನಿಂದ ಸಣ್ಣವರು ಮೃತರಾದರೆ ಕರ್ತೃವಿಗೆ ಕ್ಷೌರವು ನಿಷಿದ್ಧವಾಗಿದೆ. ಚಿಕ್ಕತಂದೆ ಮೊದಲಾದ ಈ ಮೂರು ಜನರ ವಿಷಯದಲ್ಲಿ ಅವರು ಸಣ್ಣವರಾದರೂ ಹಿರಿಯನಾದ ಕರ್ತೃವಿಗೆ ಕ್ಷೌರವು ಅಗತ್ಯವೆಂದು ಸ್ಮೃತಿವಚನಗಳಿಂದ ಸಿದ್ಧವಾದ ವಿಚಾರ.

## ಕ್ಷೌರ ಮಾಡಿಸಲಿಕ್ಕಿರುವ ಮಂತ್ರ.

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾ ಸಮಾನಿ ಚ ।
ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ಕೇಶಾನ್ ವಪಾಮ್ಯಹಂ ॥

ಎಂದು ಕಕ್ಷೋಪಸ್ಥ ಕ್ಷೌರಗಳನ್ನು ಬಿಟ್ಟು ಕೇಶಾದಿ ಕ್ಷೌರಗಳನ್ನು ಮಾಡಿಸಿ ಹೊಸತು ಬಟ್ಟೆಯನ್ನುಟ್ಟು ಮಣ್ಣಿನ ನೀರಿನ ಪಾತ್ರೆ ತೆಗೆದುಕೊಂಡು ತಲೆ ಜುಟ್ಟು ಬಿಡಿಸಿ ಸ್ನಾನಮಾಡಿ ಒದ್ದೆಯಾಗಿ ತಾನು ಪ್ರಾಚೀನಾವೀತಿಯಾಗಿಯೇ ಇದ್ದು, ತಲೆಜುಟ್ಟು ಬಿಡಿಸಿ ಮಿಂದು ಒದ್ದೆಯಾಗಿಯೇ, ಯಜ್ಞೋಪವೀತ ವನ್ನು ಮಾಲಾಕಾರವಾಗಿ ಮಾಡಿಕೊಂಡಿರುವ ಶವವಾಹಕರೊಂದಿಗೆ ಒಳಗೆ ಹೋಗಿ ಶವವನ್ನು ಅಂಗಳಕ್ಕೆ ತಂದು ಸರ್ವಾಂಗ ತುಪ್ಪವನ್ನು ಹಚ್ಚಿ [ಆಚಾರ ದಲ್ಲಿ, ಮಾಡಿನ (ಸೂರಿನ) ಧಾರೆನೀರು ಬೀಳುವಸ್ಥಳದಲ್ಲಿ ಮಡಲಿನ ಮೂರುಕಡೆ ದಂಡು ( ಕೊತ್ತಳಿಗೆ ) ಗಳನ್ನಿಟ್ಟು ಅವುಗಳಲ್ಲಿ ಒಂದು ಬಾಳೆಯೆಲೆಯನ್ನು ತುಂಡ ಮಾಡದೆ ಉದ್ದವಾಗಿಟ್ಟು ಅದರ ಮೇಲೆ ಶವವನ್ನು ಮಲಗಿಸಿ ಪಾದಪ್ರಭೃತಿ ಶಿರಃ ಪರ್ಯಂತ ಎಣ್ಣೆಹಚ್ಚಿ ಗೊಂಪು ( ಸರಳಿ ) ಹಾಕಿ ಬಿಸಿನೀರಿನಿಂದ ತೊಳೆದು ನೀರಿನಿಂದ ಅದೇ ರೀತಿಯಲ್ಲಿ ಸ್ನಾನ ಮಾಡಿಸುವುದು. ]

## ಮಿಾಯಿಸಲಿಕ್ಕಿರುವ ಮಂತ್ರ.

ಚಿತ್ತಿಸ್ಸ್ರುಗಾಸೀ 3 ತ್ । ಚಿತ್ತಮಾಜ್ಯಮಾಸೀ 3 ತ್ ।
ವಾಗ್ವೇದಿರಾಸೀ 3 ತ್ । ಅಧೀತಂ ಬರ್ಹಿರಾಸೀ 3 ತ್ ।
ಕೇತೋ ಅಗ್ನಿರಾಸೀ 3 ತ್ । ವಿಜ್ಞಾತ ಮಗ್ನೀದಾಸೀ 3 ತ್ ।
ಪ್ರಾಣೋ ಹವಿರಾಸೀ 3 ತ್ । ಸಾಮಾಧ್ವರ್ಯುರಾಸೀ 3 ತ್ ।
ವಾಚಸ್ಪತಿರ್ಹೋತಾಸೀ 3 ತ್ । ಮನ ಉಪವಕ್ತಾಸೀ 3 ತ್ ।

ತೇ ವಾ ಏತಂ ಗ್ರಹ ಮಗೃಹ್ಣತ । ವಾಚಸ್ಪತೇ ವಿಧೇನಾಮನ್ ।
ವಿಧೇಮ ತೇ ನಾಮ । ವಿಧೇ ಸ್ತ್ವ ಮಸ್ಮಾಕಂ ನಾಮ ದ್ಯಾಂ ಗಚ್ಛ ॥

ಎಂದು ಶವವನ್ನು ಮಿಾಯಿಸಿ ಗೋಪೀಚಂದನ, ತುಳಸೀಮೂಲ ಮೃತ್ತಿಕೆ, ಗಂಧಾದಿಗಳಿಂದ ಅಲಂಕರಿಸಿ ಅದರ ಕುತ್ತಿಗೆಗೆ ಲಾವಂಚದ ಮಾಲೆಯನ್ನು ಹಾಕಿ ವಸ್ತ್ರವುಡಿಸಿ [ ಶಿಷ್ಟಾಚಾರ ಪ್ರಕಾರ, ತಂದ ಹೊಸ ವಸ್ತ್ರದ ಅರ್ಧ್ಧಕರೆಯನ್ನು ಹರಿದು ಅದರಿಂದಲೇ ಕಟಿಸೂತ್ರ ಸಹಿತ ಕೌಪೀನವನ್ನುಡಿಸಿ ಕೈಗಳ ಮತ್ತು ಕಾಲುಗಳ ಅಂಗುಷ್ಠಗಳನ್ನು ಜತೆಜತೆಯಾಗಿ ಜೋಡಿಸಿ ಹಸಿ ದರ್ಭೆಗಳಿಂದ ಕಟ್ಟಿ ನವದ್ವಾರಗಳಿಗೆ ಹತ್ತಿಯನ್ನಿಡುವುದು. ] ನಾಲಿಗೆಯ ಅಡಿಗೆ ಸ್ವರ್ಣವನ್ನು ಹಾಕಿ, ತಯಾರುಮಾಡಿದ ಅತ್ತೀಮರದ ಪಲ್ಲಕಿಯಲ್ಲಿ ಹೊಸ ವಸ್ತ್ರವನ್ನು ಬಿಡಿಸಿ ಶವವನ್ನದರಲ್ಲಿ ಮೇಲ್ಮುಖವಾಗಿ ಮಲಗಿಸಿ ಅದೇ ವಸ್ತ್ರದಿಂದ ಶವದ ಪಾದದಡಿಗಳನ್ನು ಬಿಟ್ಟು ಸರ್ವಾಂಗವನ್ನೂ ಹಾಸಿದ ವಸ್ತ್ರದ ನಾಲ್ಕನೇ ಮೂರಂಶದಿಂದ ಮುಸುಕಿ ಶವವನ್ನು ಆ ವಸ್ತ್ರದಿಂದ ಬಿಗಿದು ಕಟ್ಟಿ ಪಲ್ಲಕಿಗೂ ಚೆನ್ನಾಗಿ ಬಿಗಿದು ಕಟ್ಟಬೇಕು. ಅನಂತರ ಆ ಬಟ್ಟೆಯ ಉಳಿದ ಒಂದಂಶವನ್ನು ತನಗೆ ಉತ್ತರೀಯಕ್ಕಾಗಿ ಹರಿದು ಉತ್ತರೀಯ ಹಾಕಿಕೊಳ್ಳಬೇಕು.

[ ನಮ್ಮ ದೇಶಾಚಾರದಂತೆ, ಹೆಂಡತಿಯಿದ್ದರೆ ಗಂಡನ ಶವಕ್ಕೆ ಮೂರು ಪ್ರದಕ್ಷಿಣ ಬಂದು ಪತಿಯ ಪಾದಕಮಲಗಳಲ್ಲಿ ತನ್ನ ಮಾಂಗಲ್ಯಗಳನ್ನು ಸಮರ್ಪಿಸಿ ನಮಸ್ಕಾರ ಮಾಡಿ ಒಳಗೆ ಹೋದಮೇಲೆ ಕರ್ತೃವು,

( ಉಪವೀತೀ ) ಅನಾದಿನಿಧನೋ .... ... ಭವ ||

ಎಂದು ಪ್ರಾಯಶ್ಚಿತ್ತಕ್ಕೆ ಸ್ವರ್ಣವನ್ನಿಟ್ಟು ನಮಸ್ಕರಿಸಿ

( ಪ್ರಾಚೀನಾವೀತೀ ) ಮಮ ಪಿತುಃ ಔರ್ಧ್ವ ದೈಹಿಕಕರ್ಮಣಿ ಗೃಹಾತ್ ಶ್ಮಶಾನದೇಶಂ ಪ್ರತಿ ಶವನಿರ್ಹರಣಾಧಿಕಾರ ಸಿದ್ಧಿರಸ್ತ್ವಿತಿ ಭವಂತೋಽನುಗೃಹ್ಣಂತು |

ಎಂದು ಪ್ರಾರ್ಥಿಸಿಕೊಂಡು ಬ್ರಾಹ್ಮಣರಿಂದ " ಅಸ್ತು " ಎಂಬ ಅನುಜ್ಞೆಯನ್ನು ಪಡೆಯಬೇಕು. ಅನಂತರ,

ಓಂ ವಾತಾಸ್ತೇ ವಾಂತು ಪಥಿ ಪುಣ್ಯಗಂಧಾ ಮನಸ್ಸುಖಾ ಗಾತ್ರ ಸುಖಾನುಲೋಮಾಃ । ತ್ವಚಸ್ಸುಖಾ ಮಾಂಸಸುಖಾ ಅಸ್ಥಿಸೌಖ್ಯಾ ವಹಂತು ತ್ವಾ ಮರುತಸ್ಸುಕೃತಾಂ ಯತ್ರ ಲೋಕಾಃ ॥

ಎಂದು ಜಲಪಾತ್ರಸಮೇತನಾಗಿ ಶವಕ್ಕೆ ಅಪ್ರದಕ್ಷಿಣಬಂದು ಪಾದದೇಶದಲ್ಲಿ ........ಗೋತ್ರ........ಪ್ರೇತೇದಂ ತೇ ಪಾದದೇಶೇ ತಿಲೋದಕ ಮುಪತಿಷ್ಠತಾಂ ।

ಎಂದು ತಿಲೋದಕವನ್ನು ಕೊಡಬೇಕು. ಅನಂತರ ಇದೇ ರೀತಿಯಲ್ಲಿ ಸುತ್ತುಬಂದು ಮಧ್ಯದೇಶದಲ್ಲಿ,

....ಗೋತ್ರ ........ ಪ್ರೇತೇದಂ ತೇ ಮಧ್ಯದೇಶೇ ತಿಲೋದಕ ಮುಪತಿಷ್ಠತಾಂ ।

ಎಂದು ತಿಲೋದಕವನ್ನು ಕೊಟ್ಟು ಪುನಃ ಇದೇರೀತಿಯಲ್ಲಿ ಸುತ್ತುಬಂದು ಶಿರೋದೇಶದಲ್ಲಿ ಗೋತ್ರನಾಮಗಳನ್ನು ಸೇರಿಸಿ,

ಶಿರೋದೇಶೇ ತಿಲೋದಕ ಮುಪತಿಷ್ಠತಾಂ ।

ಎಂದು ತಿಲೋದಕವನ್ನು ಕೊಡಬೇಕು. ತಾಯಿ ಮೊದಲಾದ ಸ್ತ್ರೀಯರಿಗಾದರೆ, ತಿಲೋದಕ, ಪಿಂಡದಾನ ಮೊದಲಾದ ಎಲ್ಲಾ ಕೆಲಸಗಳಲ್ಲಿ ಸ್ತ್ರೀಲಿಂಗಾಂತವಾಗಿ,

.......ಗೋತ್ರೇ .... .......ದೇವೀದೇ ಪ್ರೇತ ಇದಂ ತೇ — ।

ಎಂದು ಆಯಾ ಗೋತ್ರ ನಾಮ ಸೇರಿಸಿಕೊಳ್ಳುವುದನ್ನು ಮರೆಯಬಾರದು. ]

## ದಾಹಾಗ್ನಿಗಳನ್ನು ಸಂಪಾದಿಸುವ ಕ್ರಮ

ಪತಿಗಿಂತ ಮೊದಲು ಪತ್ನಿಯು ಮೃತಳಾದರೆ ಪತಿಯು ಕ್ರಮಪ್ರಕಾರ ಅಗ್ನಿಪ್ರತಿಷ್ಠಾಪನೆ ಮಾಡಿ ಅಕ್ಷತೆಯನ್ನು ತೆಗೆದು,

ಓಂ ಪ್ರತ್ಯವರೋಹ ಜಾತವೇದಃ ಪುನಸ್ತ್ವಂ ದೇವೇಭ್ಯೋ ಹವ್ಯಂವಹ ನಃ ಪ್ರಜಾನನ್ ।

ಎಂದಿಷ್ಟೇ ಹೇಳಿ ಇದರ ಉತ್ತರಾರ್ಧವನ್ನು ಹೇಳದೆ ತನ್ನಲ್ಲಿಯೇ ಅರ್ಧ ಅಗ್ನಿಯನ್ನು ಉಳಿಸಿ ಇತರ ಅರ್ಧಾಗ್ನಿಯನ್ನಾಹ್ವಾನಿಸಿ ಆ ಅಗ್ನಿಯಿಂದಲೇ ಪತ್ನಿಯನ್ನು ದಹನಮಾಡಬೇಕು. ಆ ಮೇಲೆ ಪತಿಯು ತನ್ನ ಮೃತಿಪರ್ಯಂತವೂ ಉಳಿದ ಅರ್ಧಾಗ್ನಿಯನ್ನಾಹ್ವಾನಿಸಿ ಔಪಾಸನವನ್ನು ಮಾಡುತ್ತಾ ಬರಬೇಕು.

ಔಪಾಸನವನ್ನು ಮಾಡಿಕೊಂಡೇ ಬಂದವನು ಮೃತನಾದರೆ ಕರ್ಮಾಧಿಕಾರಿಯು ವಿಧಿಪ್ರಕಾರ ಅಗ್ನಿಪ್ರತಿಷ್ಠಾಪನವನ್ನು ಮಾಡಿ ಶವದ ಬಲಕೈಯಲ್ಲಿ ಅಕ್ಷತೆಯನ್ನಿಟ್ಟು–

ಓಂ ಉಪಾವರೋಹ ಜಾತವೇದ ಇಮಂ ತಂ ಸ್ವರ್ಗಾಯ ಲೋಕಾಯ ನಯ ಪ್ರಜಾನನ್ । ಆಯುಃ ಪ್ರಜಾಗ್ಂ ರಯಿಮಸ್ಮಾಸು ಧೇಹ್ಯಜಸ್ರೋ ದೀದಿಹಿ ನೋ ದುರೋಣೇ ॥

ಎಂದು ಹೇಳಿ ಅಗ್ನಿಗೆ ಹಾಕಿಸಿ ಕ್ರಮಪ್ರಕಾರ ಅದೇ ಔಪಾಸನಾಗ್ನಿಯಿಂದ ದಹನವನ್ನು ಮಾಡಬೇಕು.

---

## ಅಗ್ನಿಯ ವಿಚಾರ.

ಬ್ರಹ್ಮಚಾರಿ, ಅವಿವಾಹಿತ, ಅನುಪನೀತ, ಕೆಲವುಕಾಲ ವಿಚ್ಛಿನ್ನಾಗ್ನಿಯಾಗಿದ್ದು ಮತ್ತೂ ಪ್ರಾಯಶ್ಚಿತ್ತಮಾಡಿ ಅಗ್ನಿಸಿದ್ಧಿಯನ್ನು ಮಾಡದಿರುವ ನಿರಗ್ನಿಕನ ಹೆಂಡತಿ ಮೊದಲಾದವರನ್ನು ಕಪಾಲಾಗ್ನಿ[1] ಯಿಂದಲೋ ಲೌಕಿಕಾಗ್ನಿ[2] ಯಿಂದಲೋ ದಹಿಸಬೇಕು. ಸಮಾವರ್ತನವಾಗಿ ವಿವಾಹವಾಗದಿರುವ

---

1. ಒಡದ ಮಡಕೆಯ ಅರ್ಧಭಾಗವ (ಓಡ) ನ್ನು ಬೆಂಕಿಮೇಲಿಟ್ಟು ಚೆನ್ನಾಗಿ ಕಾಯಿಸಿ ಬೆಂಕಿಯಿಂದ ಅದು ಕೆಂಬಣ್ಣವಾಗುವಾಗ ಒಣಸೆಗಣ ಮೊದಲಾದವುಗಳನ್ನು ಹಾಕಿ " ಓಂ ಭೂರ್ಭುವಸ್ಸುವಸ್ಸ್ವಾಹಾ " ಎಂದು ವ್ಯಾಹೃತಿಗಳಿಂದ ಅಜ್ಯಾಹುತಿ ಕೊಟ್ಟು ಸಂಸ್ಕರಿಸಲ್ಪಟ್ಟ ಅಗ್ನಿಯು.
2. ಪತಿತಾಗ್ನಿ, ಸೂತಿಕಾಗ್ನಿ ಮೊದಲಾದ ಅಗ್ನಿಗಳಲ್ಲದೆ ಅರಣಿಕೋಲಿನಿಂದುಂಟಾದ ಅಥವಾ ಶ್ರೋತ್ರಿಯರ ಮನೆಯ ಅಗ್ನಿಯು ಲೌಕಿಕಾಗ್ನಿಯು.

ಆನಂತರ ಔಪಾಸಾಗ್ನಿಯನ್ನು ಬಾಂಧವರ ಕೈಯಲ್ಲಿ ಕೊಟ್ಟು ಆದರ ಹಿಂದೆ ದಹನೋಪಯುಕ್ತ ಎಲ್ಲಾ ಸಾಮಾನುಗಳನ್ನು ಕಳುಹಿಸಿ ಶವದ ಶಿರಸ್ಸು ಮುಂದಾಗುವ ಹಾಗೆ ಆದರ ಶಿರೋದೇಶದಲ್ಲಿ ಕರ್ತೃವು * ತಾನೇ ಹೊತ್ತುಕೊಂಡವನಾಗಿ ಶವಾಗ್ನಿಗಳ ಮಧ್ಯದಲ್ಲಿ ಇತರರುಬಾರದಹಾಗೆ ಜಾಗ್ರತೆಯಿಂದ, ಗೃಹ ಮತ್ತು ಶ್ಮಶಾನಗಳಿಗೆ ಎಷ್ಟು ದೂರವಿದೆಯೋ ಆ ದೂರದ ಮಧ್ಯಭೂಮಿಯ ವರೆಗೆ ಕೊಂಡುಹೋಗಿ ಶವವನ್ನಿಡಬೇಕು. [ ಅನಂತರ ಪ್ರಬಲವಾದ ಶಿಷ್ಟಾಚಾರ ಪ್ರಕಾರ, ಇಮೇ ಜೀವೇತ್ಯಸ್ಯ ಸಂಕುಸುಕೋ ಮೃತ್ಯುಸ್ತ್ರಿಷ್ಟುಪ್ ಪ್ರೇತಮುಖಾವಲೋಕನೇ ವಿನಿಯೋಗಃ —

ಓಂ ಇಮೇ ಜೀವಾ ವಿಮೃತೈರಾವವೃತ್ರನ್ನಭೂದ್ಭದ್ರಾ ದೇವಹೂತಿರ್ನೋ ಅದ್ಯ। ಪ್ರಾಂಚೋ ಅಗಾಮ ನೃತಯೇ ಹಸಾಯ ದ್ರಾಘೀಯ ಆಯುಃ ಪ್ರತರಂ ದಧಾನಾಃ ॥

---

ಸ್ನಾತಕನನ್ನೂ, ವಿಧವೆಯನ್ನೂ, ಮತ್ತು ಅರ್ಧಾಗ್ನಿಯನ್ನುಳಿಸದೆ ಇದ್ದು ಪ್ರಾಯಶ್ಚಿತ್ತಮಾಡಿಯಾದರೂ ಪುನಃ ಅಗ್ನಿಸಿದ್ಧಿಯನ್ನುಮಾಡದ ವಿಧುರನನ್ನೂ ಕೂಡ ಉತ್ತಪನಾಗ್ನಿ[1] ಯಿಂದ ದಹಿಸಬೇಕು. ಬಾಲ ಮತ್ತು ಕನ್ನಿಕೆಯರನ್ನು ತುಷಾಗ್ನಿ[2] ಯಿಂದ ದಹಿಸಬೇಕು.

---

* ಕರ್ತೃವು ಶವಾಗ್ನಿಗಳ ಮಧ್ಯದಲ್ಲಿ ಸಾಹಿತ್ಯಗಳನ್ನು ಸಾಗಿಸಿಕೊಂಡು ಹೋಗಬೇಕೆಂದು ಶಾಸ್ತ್ರವಚನವಿರುತ್ತಿದ್ದರೂ ಗಾರುಡಾದಿ ಪುರಾಣಗಳಲ್ಲಿ ಮಾತಾಪಿತೃಗಳ ಶವವನ್ನು ಮಗನೇ ಹೊತ್ತರೆ ಫಲಾಧಿಕ್ಯವು ಹೇಳಲ್ಪಟ್ಟಿರುವುದರಿಂದ ದೇಶಾಚಾರವು ಅದನ್ನೇ ಅನುಸರಿಸಿ ಬಂದದ್ದಾಗಿರಬಹುದು.

1. ಒಂದು ಮುಷ್ಟಿ ದರ್ಭೆಯನ್ನಗ್ನಿಯಿಂದ ಹೊತ್ತಿಸಿ ಆದರಿಂದ ಮತ್ತೊಂದು ಮುಷ್ಟಿ ದರ್ಭೆಗೆ ಹೊತ್ತಿಸಿ ಆದರಿಂದ ಮತ್ತೊಂದು ಮುಷ್ಟಿ ದರ್ಭೆಗೆ ಹೊತ್ತಿಸಿರುವ ಅಗ್ನಿಯು ಉತ್ತಪನಾಗ್ನಿಯು.

2. ಭತ್ತದ ಸಿಪ್ಪೆಯ ಅಗ್ನಿಯು ತುಷಾಗ್ನಿಯು.

ಎಂದು ಪ್ರಾವರಣ ವಸ್ತ್ರವನ್ನು ಬಿಡಿಸಿ ಪ್ರೇತಮುಖಾವಲೋಕನವನ್ನು ಮಾಡಿ ವಾಡಿಕೆಯಂತೆ ಹೊಲೆಯರಿಗೂ ಪ್ರೇತದ ಮುಖವನ್ನು ತೋರಿಸಿ ಮೊದಲಿನಂತೆ ಕಟ್ಟಿ, ಅತಿದ್ರವೇತಿ ದ್ವಯೋಃ ಯಮಶ್ವಾನೌ ತ್ರಿಷ್ಟುಪ್ ಅಧ್ವಸಿ ಪಿಂಡದಾನೇ ವಿನಿಯೋಗಃ —

ಓಂ ಅತಿದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ । ಅಥಾ ಪಿತೄನ್ ಸು ವಿದತ್ರಾಂಽ ಉಪೇಹಿ ಯಮೇನ ಯೇ ಸಧ-ಮಾದಂ ಮದಂತಿ ॥ ಶ್ಯಾಮಾಯಾಯಂ ಪಿಂಡ ಉಪತಿಷ್ಠತು ॥

ಎಂದು ಶವದ ಬಲಭಾಗದಲ್ಲಿ ಒಂದು ಸಕ್ತುಪಿಂಡವನ್ನು ಕೊಡಬೇಕು. ಪುನಃ —

ಓಂ ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಥಿ ರಕ್ಷೀ ನೃಚಕ್ಷಸೌ । ತಾಭ್ಯಾಮೇನಂ ಪರಿದೇಹಿ ರಾಜನ್ ಸ್ವಸ್ತಿ ಚಾಸ್ಮಾ ಅನಮೀವಂ ಚ ಧೇಹಿ ॥ ಶಬಲಾಯಾಯಂ ಪಿಂಡ ಉಪತಿಷ್ಠತು ॥

ಎಂದು ಶವದ ಎಡಭಾಗದಲ್ಲಿ ಮೊದಲಿನಂತೆ ಒಂದು ಪಿಂಡದಾನವನ್ನುಮಾಡಿ ( ಉಪವೀತೀ ) ಪ್ರಾಯಶ್ಚಿತ್ತಕ್ಕೆ ಹಿರಣ್ಯವನ್ನು ತೆಗೆದು, ಅನಾದಿ ನಿಧನೋ ............ ಭವ ॥ ಎಂದು ಮೊದಲಿನಂತಿಟ್ಟು ನಮಸ್ಕರಿಸಿ ( ಪ್ರಾಚೀನಾವೀತೀ ) ........ ಗೋತ್ರಸ್ಯ ............ ಪ್ರೇತಸ್ಯ ಔರ್ಧ್ವದೈಹಿಕ ಕರ್ಮಣಿ ಮಧ್ಯದೇಶಾತ್ ಶ್ಮಶಾನದೇಶಂ ಪ್ರತಿ ಶವನಿರ್ಹರಣಾಧಿಕಾರ ಸಿದ್ಧಿರಸ್ತ್ವಿತಿ ಭವಂತೋಽನುಗೃಹ್ಣಂತು । ಎಂದು ಹೇಳಿ "ಅಸ್ತು" ಎಂಬ ಅನುಜ್ಞೆಯನ್ನು ಪಡೆದು ಮೊದಲಿನಂತೆ, ವಾತಾ ಸ್ತ್ರೇವಾಂತು ............ ಲೋಕಾಃ ॥ ಎಂದು ಜಲಪಾತ್ರ ಸಮೇತನಾಗಿ ಅಪ್ರದಕ್ಷಿಣಬರುತ್ತಾ ಪ್ರೇತದ ಪಾದ, ಮಧ್ಯ, ಶಿರೋದೇಶಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ತಿಲೋದಕವನ್ನು ಕೊಡಬೇಕು. ]

ಅನಂತರ ತಿರುಗಿಸಿ ( ಶವದ ಕಾಲುಗಳು ಮುಂದಕ್ಕಾಗುವಂತೆ ಮಾಡಿ) ತಾನು ಅದರ ಶಿರೋದೇಶದಲ್ಲೇ ಹೊತ್ತುಕೊಂಡು ಮೊದಲಿನಂತೆ ಅಗ್ನಿಯನ್ನು ಮುಂದುಮಾಡಿ ಶ್ಮಶಾನದೇಶಕ್ಕೆ ಬಂಧುಗಳೊಂದಿಗೆ ಹೋಗಿ ಕಾಷ್ಠಕ್ಕೆ ಅಪ್ರದಕ್ಷಿಣಬಂದು ವಾಯವ್ಯ ದಿಕ್ಕಿನಲ್ಲಿ ಅಗ್ನಿಯನ್ನಿಡಿಸಿ ಶವವನ್ನು ಕಾಷ್ಠದ ಪಡು ಭಾಗದಲ್ಲಿ ಆಗ್ನೇಯಕ್ಕೆ ಶಿರಸ್ಸುಮಾಡಿಡಬೇಕು. ಮೃತನೌಪಾಸನಾಗ್ನಿಯು ವಿಚ್ಛಿನ್ನ ( ಶೂನ್ಯ ) ವಾಗಿದ್ದಲ್ಲಿ, ತಂದ ಅಗ್ನಿಯು ಕೇವಲ ಲೌಕಿಕಾಗ್ನಿಯಾಗಿದ್ದರೆ ಮುಂದೆ ಹೇಳುವ ಪುನಸ್ಸಂಧಾನವನ್ನು ಮಾಡಬೇಕು.

## ಪ್ರೇತ ಪುನಸ್ಸಂಧಾನ.

ಕರ್ಮಿಯು ಕಾಷ್ಠದ ಉತ್ತರಭಾಗದಲ್ಲಿ ಪೂರ್ವಾಭಿಮುಖವಾಗಿ ಜಲಪಾತ್ರದೊಂದಿಗೆ ಕುಳಿತು ( ಉಪ ) ಸ್ವಸ್ತಿ ಪೂರ್ವೋಚ್ಚರಿತ ........ ಸಿಧ್ಯರ್ಥಂ ( ಪ್ರಾಚೀ ) ... ....... ಗೋತ್ರಸ್ಯ ........ ... ಪ್ರೇತಸ್ಯ .... ....... ಗೃಹ್ಯಾಗ್ನಿ ವಿಚ್ಛೇದನಿಮಿತ್ತಂ ದಾಹಾಯಾಗ್ನಿಸಿಧ್ಯರ್ಥಂ ಪ್ರೇತಾಧಾನಂ ಕರಿಷ್ಯಾಮಿ ॥ ಎಂದು ಸಂಕಲ್ಪಿಸಿ, ಪ್ರಾಯಶ್ಚಿತ್ತಕ್ಕೆ ಯಥಾಶಕ್ತಿ ಹಿರಣ್ಯಗಳನ್ನು ತೆಗೆದು ( ಉಪ ) ಅನಾದಿನಿಧನೋ ............ ಭವ ॥ ಎಂದು ಮೊದಲಿನಂತಿಟ್ಟು ನಮಸ್ಕರಿಸಿ ( ಪ್ರಾಚೀ ) .... .. ... ಗೋತ್ರಸ್ಯ ........ .. ಪ್ರೇತಸ್ಯ ಗೃಹ್ಯಾಗ್ನಿ ವಿಚ್ಛೇದದಿನಾದಾರಭ್ಯ ಏತಾವಂತಂ ಕಾಲಂ ಗೃಹ್ಯಾಗ್ನಿ ವಿಚ್ಛೇದ ಜನಿತಪ್ರತ್ಯವಾಯಪರಿಹಾರಾರ್ಥಂ ಪ್ರತ್ಯಬ್ದಂ ಏಕಕೃಚ್ಛ್ರಪ್ರಾಯಶ್ಚಿತ್ತಂ ತತ್ಪ್ರತ್ಯಾಮ್ನಾಯ ಗೋನಿಷ್ಕ್ರಯೀಭೂತ ಯಥಾಶಕ್ತಿರಜತದ್ರವ್ಯಂ, ಗೃಹ್ಯಾಗ್ನಿ ವಿಚ್ಛೇದೇನ ಲುಪ್ತಾನಾಂ ಸಾಯಂಪ್ರಾತರ್ಹೋಮಾನಾಂ ತಥಾ ದರ್ಶ ಪೂರ್ಣಮಾಸ ಸ್ಥಾಲೀಪಾಕಾನಾಂ ಚ ವ್ರೀಹ್ಯಾದಿದ್ರವ್ಯ ಪ್ರತ್ಯಾಮ್ನಾಯ ಯಥಾಶಕ್ತಿ ರಜತ ದ್ರವ್ಯಂ ಚ ಬ್ರಾಹ್ಮಣೇಭ್ಯೋ ದಾತುಮಹಮುತ್ಸೃಜಾಮಿ ॥ ಎಂದು ಹೇಳಬೇಕು. ಅನಂತರ ಮುಂಭಾಗದಲ್ಲಿ ಚತುರಸ್ರಮಂಡಲಮಾಡಿ, " ಓಂ ಭೂರ್ಭುವಸ್ಸುವರೋಂ ಲೌಕಿಕಾಗ್ನಿಂ ಪ್ರತಿಷ್ಠಾಪಯಾಮಿ " ಎಂದು ಮನೆಯಿಂದ ತಂದ ಅಗ್ನಿಯನ್ನು ಪ್ರತಿಷ್ಠಿಸಿ ಅಕ್ಷತೆಯನ್ನು ತೆಗೆದು —

ಅಗ್ನಿಂ ಪ್ರಜ್ವಲಿತಂ ವಂದೇ ಜಾತವೇದಂ ಹುತಾಶನಂ ।
ಸುವರ್ಣ ವರ್ಣಮನಲಂ ಸಮಿದ್ಧಂ ವಿಶ್ವತೋಮುಖಂ ॥

ಎಂದು ಧ್ಯಾನಿಸಿ ಅಗ್ನಿಗೆ ಹಾಕಿ ಮೂರುಸಲ ನೀರನ್ನಗ್ನಿಯ ಸುತ್ತಲೂ ಹಾರಿಸಿ ಪರಿಸ್ತರಣವಿಟ್ಟು ತುಪ್ಪದ ಪಾತ್ರಕ್ಕೆ ಎರಡು ದರ್ಭೆಗಳನ್ನು ಹೊತ್ತಿಸಿ ಹಾಕಿ, ಮತ್ತೆರಡು ದರ್ಭೆಗಳನ್ನು ತೊಳೆದು ಹಾಕಬೇಕು. ಆಮೇಲೆ ಮೊದಲು ಹೊತ್ತಿಸಿದ ದರ್ಭೆಗಳನ್ನು ಪುನಃ ಹೊತ್ತಿಸಿ ಅಗ್ನಿಗೂ ಆಜ್ಯಕ್ಕೂ ಒಟ್ಟಿಗೆ ಮೂರು ಸಲ ಸುತ್ತುಬರಿಸುತ್ತಾ —

ಓಂ ಅಂತರಿತಂ ರಕ್ಷಸ್ಸೋಽಂತರಿತಾ ಅರಾತಯಃ ॥

ಎಂದು ಹೇಳಿ ಅಗ್ನಿಗೆ ಹಾಕಬೇಕು. ಪುನಃ ಎರಡು ದರ್ಭೆಗಳನ್ನು ತೆಗೆದು —

ಓಂ ಸವಿತುಸ್ತ್ವಾ ಪ್ರಸವ ಉತ್ಪುನಾಮ್ಯಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ ॥

ಎಂದು ಹೇಳುತ್ತಾ ತುಪ್ಪವನ್ನು ಮೂರುಸಲ ಗಾಳಿಸಿ ತೊಳೆದು ಅಗ್ನಿಗೆ ಹಾಕಬೇಕು. ಅನಂತರ ಆಜ್ಯಪಾತ್ರವನ್ನುಪರಿನಲ್ಲಿಟ್ಟು ತೂಷ್ಣೀಯಿಂದ ಅಗ್ನಿಯ ಎಂಟು ದಿಕ್ಕಿನಲ್ಲಿಯೂ ಗಂಧಾಕ್ಷತ ಪುಷ್ಪಗಳನ್ನಿಟ್ಟು ದರ್ಭೆಗಳಿಂದ ಅಗ್ನಿಯಲ್ಲಿ ಹೋಮಿಸಲಿಕ್ಕಿರುವ ಮಂತ್ರ —

ಅಯಾಶ್ಚೇತಿ ವಿಮದೋಽಯಾ ಅಗ್ನಿಃ ಪಙ್ಕ್ತಿಃ ಪ್ರೀತಾ ಧ್ಯಾನಾಂಗಾಜ್ಯಹೋಮೇ ವಿನಿಯೋಗಃ —

ಓಂ ಅಯಾಶ್ಚಾಗ್ನೇಽಸ್ಯ ನಭಿಶಸ್ತೀಶ್ಚ ಸತ್ಯಮಿತ್ವಮಯಾ ಅಸಿ ।
ಅಯಾಸಾ ವಯಸಾ ಕೃತೋಽಯಾಸನ್ ಹವ್ಯಮೂಹಿಷೇಽಯಾ ನೋ
ಧೇಹಿ ಭೇಷಜಂ ಸ್ವಾಹಾ ॥ ಅಗ್ನಯೇ ಅಯಾಸ ಇದಂ ನ ಮಮ ॥

ಯೇಽಸ್ಯಾಗ್ನಯೋ ಜುಹ್ವತೋ ಮಾಂಸಕಾಮಾಸ್ಸಂಕಲ್ಪಯಂತೇ
ಯಜಮಾನಮಾಂಸಂ ॥ ಜಾನಂತು ತೇ ಹವಿಷೇ ಸಾದಿತಾಯ ಸ್ವರ್ಗಂ
ಲೋಕಮಿಮಂ ಪ್ರೇತಂ ನಯಂತು ಸ್ವಾಹಾ ॥ ಸ್ವಾಹೇದಂ ನ ಮಮ ॥

ಓಂ ಭೂಸ್ಸ್ವಾಹಾ ! ಅಗ್ನಯ ಇದಂ ನ ಮಮ ॥

ಓಂ ಭುವಸ್ಸ್ವಾಹಾ । ವಾಯವ ಇದಂ ನ ಮಮ ॥

ಓಂ ಸುವಸ್ಸ್ವಾಹಾ । ಸೂರ್ಯಾಯೇದಂ ನ ಮಮ ॥

ಓಂ ಭೂರ್ಭುವಸ್ಸುವಸ್ಸ್ವಾಹಾ । ಪ್ರಜಾಪತಯ ಇದಂ ನ ಮಮ ॥

ಎಂದು ಹೋಮಿಸಿ ಪರಿಸ್ತರಣಗಳನ್ನು ವಿಸರ್ಜನಮಾಡಿ ಮೊದಲಿನಂತೆ ಮೂರುಸಲ ತೂಷ್ಣೀಯಾಗಿ ನೀರಿನಿಂದ ಅಗ್ನಿಯಸುತ್ತಲೂ ಪರಿಸಮೂಹನ ಪರ್ಯುಕ್ಷಣಗಳನ್ನು ಮಾಡಿ ಅಗ್ನಿಯನ್ನಲಂಕರಿಸಿ —

ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥

ಎಂದು ದೇವರನ್ನು ಸ್ಮರಿಸಬೇಕು. ಹೀಗೆ ಮಾಡಿದರೆ ಮೊದಲು ವಿಚ್ಛಿನ್ನ ( ಶೂನ್ಯ ) ವಾದ ಅಗ್ನಿಯು ಪುನಃ ಉತ್ಪನ್ನವಾಗುವುದು.

ಹೀಗೆ ಪ್ರೇತ ಪುನಸ್ಸಂಧಾನವು.

ಅನಂತರ ತನ್ನ ಎಡಭಾಗದಲ್ಲಿ ಸಮಿತ್ತಿನ ಕೋಲಿನಿಂದ ಭೂಮಿಯಲ್ಲಿ ಒಂದು ಹೊಂಡವನ್ನು ಮಾಡಿ ಜಲಶುದ್ಧಿಯ ನೀರನ್ನು ತುಂಬಿಸಿ ಶೈವಾಲವ ಹಾವಸೆಯ ) ನ್ನು ಹಾಕಿ ಗರ್ತೋದಕವನ್ನು ತಯಾರಿಸಬೇಕು. ಆಮೇಲೆ ಉಪ ) ಓಂ ಸ್ವಸ್ತಿ ಪೂರ್ವೋಚ್ಚರಿತ ... ...... ಸಿದ್ಧ್ಯರ್ಥಂ ಪ್ರೇತೋದ್ಧರ್ತೃ ಮಹಾವಿಷ್ಣು ಪ್ರೀತ್ಯರ್ಥಂ ( ಪ್ರಾಚೀ ) .... ....... ಗೋತ್ರಸ್ಯ ............ ಪ್ರೇತಸ್ಯ ಪ್ರೇತತ್ವ ವಿಮೋಕ್ಷಾರ್ಥಂ ಔರ್ಧ್ವ ದೈಹಿಕಂ ಕರ್ಮ ಕರಿಷ್ಯಾಮಿ ॥ ಎಂದು ಸಂಕಲ್ಪಿಸಿ, [ ಶಿಷ್ಟಾಚಾರದಂತೆ ಪ್ರಾಯಶ್ಚಿತ್ತಕ್ಕೆ ಸ್ವರ್ಣವನ್ನು ತೆಗೆದು ( ಉಪ ) ಅನಾದಿನಿಧನೋ ............ ಭವ ॥ ಎಂದು ಹೇಳಿ ಮೊದಲಿನಂತೆ ಇಟ್ಟು ನಮಸ್ಕರಿಸಿ ( ಪ್ರಾಚೀ ) ............ ಗೋತ್ರಸ್ಯ ............ ಪ್ರೇತಸ್ಯ

ಪ್ರೇತತ್ವವಿಮೋಕ್ಷಾರ್ಥಂ ಔರ್ಧ್ವದೈಹಿಕಂ ಕರ್ಮ ಕರ್ತುಂ ಮಮಾಧಿಕಾರ ಸಂಪದಸ್ತ್ವಿತಿ ಭವಂತೋಽನು ಗೃಹ್ಣಂತು । ಎಂದು ಹೇಳಿ "ಅಸ್ತು" ಎಂಬ ಅನುಜ್ಞೆಯನ್ನು ಪಡೆಯಬೇಕು. ]

ಉಪಸರ್ಪೇತಿ ಸಂಕುಸುಕಃ ಪಿತೃಮೇಧಾಸ್ತ್ರಿಷ್ಟುಪ್ ಭೂಮಿಪ್ರಾರ್ಥನೇ ವಿನಿಯೋಗಃ —

ಓಂ ಉಪಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ । ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇ ರುಪಸ್ಥಾತ್ ॥ ಅಪಸರ್ಪಂತು ತೇ ಪ್ರೇತಾ ಯೇ ಕೇಚಿದಿಹ ಪೂರ್ವಜಾಃ । ಸ್ವಸ್ತಿ ನಃ ಕೃಣುತಾಮಾಶು ಆಯಾತಃ ಪುನರಾಗಮತ್ ॥ ಎಂದು ಭೂಮಿಯನ್ನು ಪ್ರಾರ್ಥಿಸಿ, ಓಂ ದಿವಿ ಜಾತಾ ಅಪ್ಸು ಜಾತಾ ಯಾ ಜಾತಾ ಓಷಧೀಭ್ಯಃ । ಅಥೋ ಯಾ ಅದ್ರಿಜಾ ಅಪಸ್ತಾನಶ್ಶುಂಧಂತು ಶುಂಧನೀಃ ॥ ಎಂದು ಸ್ಥಲಶುದ್ಧಿಯನ್ನು ಮಾಡಿ, ಅಪೇತೇತಿ ಯಮಃ ಪಿತರಸ್ತ್ರಿಷ್ಟುಪ್ ಭೂಮಿಪ್ರೋಕ್ಷಣೇ ವಿನಿಯೋಗಃ —

ಓಂ ಅಪೇತ ವೀತ ವಿಚಸರ್ಪತಾತೋಽಸ್ಮಾ ಏತಂ ಪಿತರೋ ಲೋಕಮಕ್ರನ್ । ಅಹೋಭಿರದ್ಭಿರಕ್ತುಭಿರ್ವ್ಯಕ್ತಂ ಯಮೋ ದದಾತ್ಯವಸಾನಮಸ್ಮೈ ॥

ಎಂದು ಮೊದಲು ತಯಾರಿಸಿದ ಗರ್ತೋದಕವನ್ನು ಶಮೀಶಾಖೆಯಿಂದ ತೆಗೆತೆಗೆದು ಕಾಷ್ಠಕ್ಕೆ ಮೂರು ಸಲ ಅಪ್ರದಕ್ಷಿಣಬರುತ್ತಾ ಪ್ರತಿಯೊಂದು ಸುತ್ತಿಗೂ ಮಂತ್ರವನ್ನಾವರ್ತಿಸುತ್ತ ಪ್ರೋಕ್ಷಿಸಬೇಕು. ಆ ಮೇಲೆ ಕಾಷ್ಠದ

ವಾಯವ್ಯ ದಿಕ್ಕಿನಲ್ಲಿ ಪ್ರೋಕ್ಷಿಸಿ ತ್ರಿಕೋಣಾಕಾರದ ಸ್ಥಂಡಿಲವನ್ನು ಮಾಡಿ ಉಲ್ಲೇಖನೆಮಾಡಿ, "ಅಗ್ನೇ ತ್ವಂ ಕ್ರವ್ಯಾದನಾಮಾऽಸಿ" ಎಂದು ಔಪಾಸನಾಗ್ನಿಯನ್ನು ಪ್ರತಿಷ್ಠಾಪಿಸಬೇಕು. ( ಕಪಾಲಾಗ್ನಿ ಮೊದಲಾದವುಗಳನ್ನಾದರೆ "ಓಂ ಭೂರ್ಭುವಸ್ಸುವರೋಂ ಕ್ರವ್ಯಾದನಾಮಾನಮಗ್ನಿಂ ಪ್ರತಿಷ್ಠಾಪಯಾಮಿ" ಎಂಬ ಮಂತ್ರದಿಂದ ಪ್ರತಿಷ್ಠಾಪಿಸಬೇಕು. ) ಅನಂತರ ದರ್ಭೆಯ ಮೂಲದಿಂದ, ಓಂ ಯಮಾಯ ದಹನಪತಯೇ ಚೋಲ್ಲಿಖಾಮಿ । ಎಂದು ಹೊಂಡದ ಮಧ್ಯಭಾಗದಲ್ಲೂ,

ಓಂ ಕಾಲಾಯ ದಹನಪತಯೇ ಚೋಲ್ಲಿಖಾಮಿ । ಎಂದು ಉತ್ತರ ಭಾಗದಲ್ಲೂ,

ಓಂ ಮೃತ್ಯವೇ ದಹನಪತಯೇ ಜೋಲ್ಲಿಖಾಮಿ । ಎಂದು ದಕ್ಷಿಣ ಭಾಗದಲ್ಲೂ ಉಲ್ಲೇಖಿಸಿ, [ ದೇಶಾಚಾರದಲ್ಲಿ ಕಾಷ್ಠವನ್ನು ತಯಾರಿಸುವ ಭಾವದಿಂದ ಕೊಡಲಿ ತೆಗೆದು ಕಾಷ್ಠದ ಮಧ್ಯೋತ್ತರ ದಕ್ಷಿಣಭಾಗಗಳಲ್ಲಿ ಕಡಿದು ಅದನ್ನು ಶಿರೋದೇಶದಲ್ಲಿ ಉದಙ್ಮುಖನಾಗಿ ನಿಂತು ಹಿಂಭಾಗಕ್ಕೆ ಬಿಸಾಡುವುದು ] ಆ ಮಧ್ಯೋತ್ತರ ದಕ್ಷಿಣ ರೇಖೆಗಳಿಗೆ ಪ್ರತ್ಯೇಕವಾಗಿ ಒಂದೊಂದು ಸಲ ಆಯಾ ಮಂತ್ರಾನುಸಾರ ತಿಲೋದಕ ಕೊಡಲಿಕ್ಕಿರುವ ಮಂತ್ರಗಳು —

**ಯಮಾಯ ದಹನಪತಯೇ ಪಿತೃಭ್ಯಸ್ಸ್ವಧಾ ನಮಃ ।**
**ಕಾಲಾಯ ದಹನಪತಯೇ ಪಿತೃಭ್ಯಸ್ಸ್ವಧಾ ನಮಃ ।**
**ಮೃತ್ಯವೇ ದಹನಪತಯೇ ಪಿತೃಭ್ಯಸ್ಸ್ವಧಾ ನಮಃ ॥**

ಎಂದು ತಿಲೋದಕ ಕೊಟ್ಟು ಚಿನ್ನದ ತುಂಡುಗಳನ್ನೂ ಎಳ್ಳುಗಳನ್ನೂ ಕೂಡ ಮಾಡಿದ ಹೊಂಡದಲ್ಲಿ ಹಾಕಿ ಕಾಷ್ಠಕ್ಕೆ ಗಂಧದ ಕೊರಡು ಮೊದಲಾದುವುಗಳನ್ನು ಹಾಕಿ ಕಾಷ್ಠದಲ್ಲಿ ದರ್ಭೆಯನ್ನು ಪಸರಿಸಿ ( ಆಹಿತಾಗ್ನಿಯಾಗಿದ್ದರೆ ದರ್ಭೆಯ ಮೇಲೆ ಊರ್ಧ್ವರೋಮವಾಗಿ ಕೃಷ್ಣಾಜಿನವನ್ನೂ ಬಿಡಿಸಿ ) ಪ್ರಾವರಣ ವಸ್ತ್ರಸಹಿತ ಶವವನ್ನು ಪಲ್ಲಕಿಯಿಂದ ತೆಗೆದು ಅಗ್ನಿಯ ಉತ್ತರ ಭಾಗದಿಂದ ತಂದು ಕಾಷ್ಠದ ಮಧ್ಯದಲ್ಲಿ ತೆಂಕು ಶಿರಸ್ಸಾಗಿಡಬೇಕು. ಆ ಮೇಲೆ ಶವದ ಬಾಯಿ, ಎರಡು ಕಣ್ಣು, ಎರಡು ಮೂಗು, ಎರಡು ಕಿವಿ, ಇವುಗಳಲ್ಲಿ ಹಿರಣ್ಯಶಕಲಗಳನ್ನು ಯಾ ಆಜ್ಯ ಬಿಂದುಗಳನ್ನು ಸಪ್ತವ್ಯಾಹೃತಿಗಳನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಹಾಕಿ, ಬಾಯಿಯಲ್ಲಿ ತಿಲತಂಡುಲಗಳನ್ನೂ ಹಾಕಿ ಶವದ ಮೇಲೆ ಸರ್ವತ್ರ ತುಪ್ಪ ಬೆರಸಿದ ಎಳ್ಳುಗಳನ್ನು ಚಲ್ಲಬೇಕು.

ಪುನಃ ಕರ್ತೃವು ಮೊದಲಿನಂತೆ ಕುಳಿತು (ಉಪ) ಪೂರ್ವೋಚ್ಚರಿತ .... .. ... ಪ್ರೇತ್ಯರ್ಥಂ (ಪ್ರಾಚೀ) ... ... ... ಗೋತ್ರಸ್ಯ ಪ್ರೇತತ್ವ ವಿಮೋಕ್ಷಾರ್ಥಂ ಪ್ರೇತೋಪಾಸನಂ ಕರ್ಮ ಕರಿಷ್ಯಾಮಿ । ಎಂದು ಸಂಕಲ್ಪಿಸಿ [ಶಿಷ್ಟಾಚಾರ ಪ್ರಕಾರ, (ಉಪ) ಅನಾದಿನಿಧನೋ .......... ಭವ ॥ ಎಂದು ಮೊದಲಿನಂತೆ ಸ್ವರ್ಣವನ್ನಿಟ್ಟು ವಂದಿಸಿ (ಪ್ರಾಚೀ) .. ... ...ಗೋತ್ರಸ್ಯ .. .. .. ಪ್ರೇತಸ್ಯ ಪ್ರೇತತ್ವ ವಿಮೋಕ್ಷಾರ್ಥಂ ಪ್ರೇತೋಪಾಸನಂ ಕರ್ತುಂ ಮಮಾಧಿಕಾರ ಸಿದ್ಧಿರಸ್ತ್ವಿತಿ ಭ ... ... ... ತು । ಎಂದು ಹೇಳಿ "ಅಸ್ತು" ಎಂಬ ಅನುಜ್ಞೆಯನ್ನು ಪಡೆದು ] ಎರಡತ್ತಿಕೋಲುಗಳನ್ನು ಹಿಡಿದು ಅಗ್ನಿಂ ಕಾಮಂ, ಲೋಕಂ, ಅನುಮತಿಂ, ಏತಾಃ ಪ್ರಧಾನದೇವತಾ ಅಗ್ನ್ಯಾವಾಜ್ಯೇನ

ಪ್ರೇತಂ ಪ್ರೇತೋರಸ್ಯಾಜ್ಯೇನ ಯಕ್ಷ್ಯೇ ॥ ಓಂ ಭೂರ್ಭುವಸ್ಸುವಸ್ಸ್ವಾಹಾ ।

ಎಂದಾಸಮಿಧೆಗಳನ್ನು ತುಪ್ಪಕ್ಕೆ ಮುಟ್ಟಿಸಿ ಹೋಮಿಸಿ "ಪ್ರಜಾಪತಯ ಇದಂ ನ ಮಮ" ಎಂದು ಹೇಳಬೇಕು. ಅನಂತರ ಚಿತಿಸಹಿತ ಅಗ್ನಿಗೆ ಮೂರುಸಲ ನೀರು ಸುತ್ತುಬರಿಸಿ ತೆಂಕುದಿಕ್ಕು ಮೊದಲ್ಗೊಂಡು ನಾಲ್ಕುದಿಕ್ಕುಗಳಲ್ಲಿಯೂ ಪರಿಸ್ತರಣವಿಟ್ಟು, ಮೊದಲಿನಂತೆ ಮೂರುಸಲ ನೀರು ಹಾರಿಸಿ ಅಗ್ನಿಯ ದಕ್ಷಿಣಭಾಗದಲ್ಲಿ, ಪ್ರೋಕ್ಷಣೀ ಪಾತ್ರ, ಸ್ರುಕ್‌ಸ್ರುವ, ಚಮಸ ಪಾತ್ರ, ಆಜ್ಯ ಪಾತ್ರಗಳನ್ನು ಒಂದೊಂದಾಗಿ ಮೇಲ್ಮುಖವಾಗಿಟ್ಟು ಚಮಸಪಾತ್ರಕ್ಕೆ ಗತೋದಕವನ್ನು ಹೊಯ್ದು ದರ್ಭೆಗಳಿಂದ ಮುಚ್ಚಿ ಎರಡು ಕೈಗಳಿಂದಲೂ ಹಿಡಿದು,

ಇಮಮಗ್ನ ಇತಿ ದಮನೋಽಗ್ನಿಸ್ತ್ರಿಷ್ಟುಪ್ ಚಮಸಾನುಮಂತ್ರಣೇ ವಿನಿಯೋಗಃ —

ಓಂ ಇಮಮಗ್ನೇ ಚಮಸಂ ಮಾ ವಿಜಿಹ್ವರಃ ಪ್ರಿಯೋ ದೇವಾನಾಮುತ ಸೋಮ್ಯಾನಾಂ । ಏಷ ಯಶ್ಚಮಸೋ ದೇವಪಾನಸ್ತಸ್ಮಿನ್ ದೇವಾ ಅಮೃತಾ ಮಾದಯಂತೇ ॥

ಎಂದು ಜಪಿಸಿ ಎಡಭಾಗದಲ್ಲಿ ಪಸರಿಸಿದ ದರ್ಭೆಯಲ್ಲಿಡುವುದು. ಮತ್ತೆ ಒಂದು ದರ್ಭೆಯನ್ನು ಪ್ರೋಕ್ಷಣೀ ಪಾತ್ರದಲ್ಲಿಟ್ಟು ನೀರುತುಂಬಿಸಿ ಗಂಧ,

ಎಳ್ಳುಗಳನ್ನು ಹಾಕಿ ಅದೇ ದರ್ಭೆಯಿಂದ ಮೂರುಸಲ ಗಾಳಿಸಿ ಉಳಿದ ಪಾತ್ರಗಳನ್ನು ಪ್ರೋಕ್ಷಿಸಿ ಬೇರೊಂದು ದರ್ಭೆ ಮುಚ್ಚಿ ಮೊದಲಿನ ದರ್ಭೆಯನ್ನು ತೆಗೆದು ಆಜ್ಯಪಾತ್ರದಲ್ಲಿಟ್ಟು ಆ ಪಾತ್ರವನ್ನು ತನ್ನ ಮುಂದಿಟ್ಟು ತುಪ್ಪಹೊಯ್ದು ಮೂರು ಕೆಂಡಗಳನ್ನು ಕೆಳಹಾಕಿ ಅವುಗಳಮೇಲೆ ಆ ಪಾತ್ರವನ್ನಿಟ್ಟು ಎರಡು ದರ್ಭೆಗಳನ್ನು ಹೊತ್ತಿಸಿ ಪಾತ್ರದಲ್ಲಿರುವ ತುಪ್ಪಕ್ಕೆ ಹಾಕಿ ಎರಡು ದರ್ಭೆ ತುದಿಗಳನ್ನು ತೊಳೆದೂ ಹಾಕಿ ಮೊದಲು ಹೊತ್ತಿಸಿದ ದರ್ಭೆಗಳನ್ನು ತೆಗೆದು ಪುನಃ ಹೊತ್ತಿಸಿ ಶವಸಹಿತ ಚಿತಿಗೂ, ಆಜ್ಯಕ್ಕೂ, ಓಂ ಅಂತರಿತಂ ........... ಅರಾತಯಃ ॥ ಎಂದು ಮೂರುಸಲ ಸುತ್ತುಬರಿಸಿ ಅಗ್ನಿಗೆ ಹಾಕುವುದು. ಆ ಮೇಲೆ ಕೆಂಡದಿಂದ ಪಾತ್ರವನ್ನು ಕೆಳಗಿಳಿಸಿ ಕೆಂಡಗಳನ್ನು ಪುನಃ ಅಗ್ನಿಗೆ ಹಾಕಿ ಕೈ ತೊಳೆದು ಆಜ್ಯಪಾತ್ರದಲ್ಲಿದ್ದ ಮೊದಲಿನ ದರ್ಭೆ ಯೊಂದನ್ನು ತೆಗೆದು ಆಜ್ಯವನ್ನು ಮೂರುಸಲ ಗಾಳಿಸಿ ಅಗ್ನಿಗೆ ಹಾಕಿ ತನ್ನ ಮುಂಭಾಗದಲ್ಲಿ ಪ್ರೋಕ್ಷಿಸಿ ದರ್ಭೆ ಹಸರಿಸಿ ಆಜ್ಯ ಪಾತ್ರವನ್ನದರಲ್ಲಿಡಬೇಕು. ಮತ್ತೆ ಅತ್ತಿಯೆಲೆಯಿಂದ ಮಾಡಿದ ಸ್ರುಕ್‌ಸ್ರುವಗಳನ್ನು ದರ್ಭೆಗಳಿಂದ ಚೆನ್ನಾಗಿ ಮೂರುಸಲ ಗುಡಿಸಿ ದರ್ಭೆಗಳನ್ನಗ್ನಿಗೆ ಹಾಕಬೇಕು. ಮೊದಲಿನಂತೆ ಚಿತಿ ಸಹಿತ ಅಗ್ನಿಗೆ ಮೂರುಸಲ ನೀರಿನಿಂದ ಸುತ್ತುವರಿಸಿ ಗಂಧಾಕ್ಷತ ಪುಷ್ಪಗಳಿಂದ ಚಿತಿಸಹಿತ ಅಗ್ನಿಯನ್ನೆಂಟುದಿಕ್ಕಿನಲ್ಲಿಯೂ ತೂಷ್ಣೀಯಾಗಿ ಅಲಂಕರಿಸಿ ಎಡದ ಮೊಣಕಾಲೂರಿ ಕುಳಿತು ಸ್ರುವ ತೆಗೆದು ತುಪ್ಪವನ್ನು ಹೋಮಿಸಲಿಕ್ಕಿರುವ ಮಂತ್ರಗಳು —

| | |
|---|---|
| ಓಂ ಅಗ್ನಯೇ ಸ್ವಾಹಾ | ಅಗ್ನಯ ಇದಂ ನ ಮಮ । |
| ಓಂ ಕಾಮಾಯ ಸ್ವಾಹಾ | ಕಾಮಾಯೇದಂ ನ ಮಮ । |
| ಓಂ ಲೋಕಾಯ ಸ್ವಾಹಾ | ಲೋಕಾಯೇದಂ ನ ಮಮ । |
| ಓಂ ಅನುಮತಯೇ ಸ್ವಾಹಾ | ಅನುಮತಯ ಇದಂ ನ ಮಮ । |

ಎಂದಗ್ನಿಯಲ್ಲಿ ಹೋಮಿಸಿ ಐದನೆಯ ಆಹುತಿಯನ್ನು ಶವದ ಎದೆಯಲ್ಲಿ ಹೋಮಿಸಲಿಕ್ಕಿರುವ ಮಂತ್ರ —

ಓಂ ಅಸ್ಮಾದ್ವೈತ್ವಮಜಾಯಥಾ ಅಯಂ ತ್ವದಭಿಜಾಯತಾಂ । ಅಸೌ (ನಾರಾಯಣ) ಸ್ವರ್ಗಾಯ ಲೋಕಾಯ ಸ್ವಾಹಾ ॥ (ನಾರಾಯಣ) ಪ್ರೇತಾಯೇದಂ ನ ಮಮ ॥

( ಈ ಮೇಲಿನ ಆವರಣ ದೊಳಗಿನ ಹೆಸರನ್ನು ಪ್ರೇತದ ಹೆಸರಿಗೆ ತಕ್ಕ ಸಂಬುದ್ಧ್ಯಂತವಾಗಿ ಬದಲಾಯಿಸಿ ಕೊಳ್ಳಬೇಕು. ಇದರಲ್ಲಿ ಸ್ವಿಷ್ಟಕೃದಾದಿ ಹೋಮಶೇಷವಿಲ್ಲ ) ಅನಂತರ ಐದು ಸಕ್ತುಪಿಂಡಗಳನ್ನು ಮಾಡಿ ಮೊಸರು ತುಪ್ಪಗಳಿಂದ ಅಭಿಘಾರಮಾಡಿ ಬೇರೆಬೇರೆಯಾಗಿ ಶವದ ಮೇಲೆ ಇಡಲಿರುವ ಮಂತ್ರಗಳು —

ಅಗ್ನೇರ್ವರ್ಮೇತಿ ದಮನೋಽಗ್ನಿ ಸ್ತ್ರಿಷ್ಟುಪ್ ಪ್ರೇತಸ್ಯ ಲಲಾಟೇ ಮುಖೇಚ ಸಕ್ತುಪಿಂಡದಾನೇ ವಿನಿಯೋಗಃ —

ಓಂ ಅಗ್ನೇರ್ವರ್ಮ ಪರಿ ಗೋಭಿರ್ವ್ಯಯಸ್ವ ಸಂಪ್ರೋರ್ಣುಷ್ವ ಪೀವಸಾ ಮೇದಸಾ ಚ । ನೇತ್ವಾ ಧೃಷ್ಣುರ್ಹರಸಾ ಜರ್ಹೃಷಾಣೋ ದಧೃಗ್ ವಿಧಕ್ಷ್ಯನ್ ಪರ್ಯಂಖಯಾತೇ ॥

ಎಂದು ಶವದ ಹಣೆಯಲ್ಲಿಯೂ, ಬಾಯಿಯಲ್ಲಿಯೂ ಎರಡು ಪಿಂಡಗಳ ನ್ನಿಡಬೇಕು.

ಅತಿದ್ರವೇತಿ ಮಂತ್ರದ್ವಯಸ್ಯ ಯಮಶ್ವಾನೌ ತ್ರಿಷ್ಟುಪ್ । ಬಾಹು ದ್ವಯೇ ಹೃದಯೇ ಚ ಸಕ್ತುಪಿಂಡದಾನೇ ವಿನಿಯೋಗಃ —

ಓಂ ಅತಿದ್ರವ ಸಾರಮೇಯೌ ... ........ ಸಧಮಾದಂ ಮದಂತಿ । ಯೌತೇ ಶ್ವಾನೌ ಯಮ ........... ಅನಮೀವಂ ಚ ಧೇಹಿ ॥

ಎಂದು ಎರಡು ಕೈಗಳಲ್ಲಿ ಎರಡು. ಒಂದು ಹೃದಯದಲ್ಲಿ. ಹೀಗೆ ಐದು ಸಕ್ತು ಪಿಂಡಗಳನ್ನು ಇಡಬೇಕು.

---

## † ಪುತ್ತಲ ವಿಧಿ ವಿಚಾರ.

ಬೇರೆ ನಕ್ಷತ್ರದಲ್ಲಿ ಮೃತಪಟ್ಟು, ಧನಿಷ್ಠಾದಿ ಐದು ನಕ್ಷತ್ರಗಳಲ್ಲಿ, ಯಾವು ದಾದರೊಂದರಲ್ಲಿ ಶವವನ್ನು ದಹನಮಾಡಬೇಕಾಗಿ ಬಂದರೆ; ಈ ಪುತ್ತಲವಿಧಿಯನ್ನು

## † ಪುತ್ತಲ ವಿಧಿಯು

ಕರ್ತೃವು ಶವದ ಸಮೀಪದಲ್ಲಿ ಕುಳಿತು ( ಉಪ ) ದೇಶಕಾಲಗಳನ್ನುಚ್ಚರಿಸಿ ( ಪ್ರಾಚೀ ) ...... ಗೋತ್ರಸ್ಯ . ... .. ಪ್ರೇತಸ್ಯ ಧನಿಷ್ಠಾಪಂಚಕಮರಣ ಸೂಚಿತ ವಂಶಾರಿಷ್ಟ ವಿನಾಶಾರ್ಥಂ ಪಂಚಕವಿಧಿಂ ಕರಿಷ್ಯೇ । ಎಂದು ಸಂಕಲ್ಪಿಸಿ [ ಶಿಷ್ಟಾಚಾರದಂತೆ, ( ಉಪ ) ಅನಾದಿ ನಿಧನೋ ....... .. ಭವ ॥ ಎಂದು ಪ್ರಾಯಶ್ಚಿತ್ತಕ್ಕೆ ಸ್ವರ್ಣವನ್ನಿಟ್ಟು ನಮಸ್ಕರಿಸಿ (ಪ್ರಾಚೀ) .... .... .. ಗೋತ್ರಸ್ಯ ... ....... ಪ್ರೇತಸ್ಯ ಪಂಚಕವಿಧಿಂ ಕರ್ತುಂ ಮಮಾಧಿಕಾರ ಸಂಪದಸ್ತ್ವಿತಿ ಭವಂತೋಽನುಗೃಹ್ಣಂತು । ಎಂದು ಹೇಳಿ " ಅಸ್ತು " ಎಂಬ ಅನುಜ್ಞೆಯನ್ನು ಪಡೆಯಬೇಕು ] ದರ್ಭೆಗಳಿಂದ ಐದು ಮನುಷ್ಯ ಪ್ರತಿಮೆಗಳನ್ನು ಮಾಡಿ * ಯವಪಿಷ್ಟದಿಂದ ಅವುಗಳನ್ನು ಲೇಪಿಸಿ ಪಟ್ಟೆದಾರಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಸುತ್ತಿ ಅವುಗಳನ್ನು ಹಿಡಿದು ನಕ್ಷತ್ರಮಂತ್ರಗಳನ್ನು ಜಪಿಸಬೇಕು. —

ಜ್ಮಯಾ ಅತ್ರ ವಸಿಷ್ಠೋ ವಸವಸ್ತ್ರಿಷ್ಟುಪ್ ಜಪೇ ವಿನಿಯೋಗಃ —

ಓಂ ಜ್ಮಯಾ ಅತ್ರ ವಸವೋರಂತದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ । ಅರ್ವಾಕ್ ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥

ತತ್ತ್ವಾಯಾಮೀತ್ಯಸ್ಯ ಶುನಶ್ಶೇಪೋ ವರುಣಸ್ತ್ರಿಷ್ಟುಪ್ ಜಪೇ ವಿನಿಯೋಗಃ —

---

ಅವಶ್ಯವಾಗಿ ಮಾಡಬೇಕು. ಅಶೌಚಾಂತ್ಯದಲ್ಲಿ ಶಾಂತಿಯು ಆಗತ್ಯವಿಲ್ಲ. ಪಂಚಕದಲ್ಲಿ ಮೃತಪಟ್ಟು ಅಶ್ವಿನ್ಯಾದಿ ಬೇರೆ ನಕ್ಷತ್ರಗಳಲ್ಲಿ ದಹನಮಾಡುವುದಾದರೆ, ಅಶೌಚಾಂತ್ಯದಲ್ಲಿ ಶಾಂತಿಯೇ ಅವಶ್ಯವಲ್ಲದೆ ಈ ಪುತ್ತಲ ವಿಧಿಯು ಅವಶ್ಯವಿಲ್ಲವೆಂದು ತಿಳಿಯತಕ್ಕದ್ದು.

---

* ಯವ ಎಂಬ ಧಾನ್ಯದ ಹುಡಿ. ಇಲ್ಲದಿದ್ದರೆ ಅಕ್ಕಿ ಹುಡಿ.

ಓಂ ತತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ । ಅಹೇಳಮಾನೋ ವರುಣೇಹ ಬೋಧ್ಯುರುಶಂಸಮಾನ ಆಯುಃ ಪ್ರಮೋಷೀಃ ॥

ಓಂ ಅಭಿ ಯೋ ಮಿಥೋ ವಸುಷಸ್ಸಂತೇ ರಾತಿಂ ದಿವೋ ರಾತಿಷಾಚಃ ಪೃಥಿವ್ಯಾಃ । ಅಹಿರ್ಬುಧ್ನ್ಯ ಉತನಶ್ಶೃಣೋತು ವರೂತ್ರ್ಯೇಕದೇನು ಭಿರ್ನಿಪಾತು ॥

ಉತನ ಇತ್ಯಸ್ಯ ವಸಿಷ್ಠೋಽಹಿರ್ಬುಧ್ನ್ಯೋ ವಿರಾಟ್‌ಜಪೇ ವಿನಿಯೋಗಃ—

ಓಂ ಉತನೋಽಹಿರ್ಬುಧ್ನ್ಯಶ್ಶೃಣೋತ್ವಜ ಏಕಪಾತ್ ಪೃಥಿವೀ ಸಮುದ್ರಃ । ವಿಶ್ವೇ ದೇವಾ ಋತಾವೃಧೋ ಹುವಾನಾಸ್ತುತಾ ಮಂತ್ರಾಃ ಕವಿಶಸ್ತಾ ಅವಂತು ॥

ಪೂಷಾಗಾ ಇತ್ಯಸ್ಯ ಭಾರದ್ವಾಜಃ ಪೂಷಾ ಗಾಯತ್ರೀ ಜಪೇ ವಿನಿಯೋಗಃ—

ಓಂ ಪೂಷಾಗಾ ಅನ್ವೇತು ನಃ ಪುಷಾ ರಕ್ಷತ್ವರ್ವತಃ । ಪೂಷಾ ವಾಜಂ ಸನೋತು ನಃ ॥

ಎಂದು ಜಪಿಸಿ ಗಂಧಾಕ್ಷತಪುಷ್ಪಗಳಿಂದ ಪೂಜಿಸಿ ಮೊದಲನೆಯದನ್ನು ಪ್ರೇತದತಲೆಯಲ್ಲಿ, ಎರಡನೆಯದನ್ನು ಅದರ ಕಣ್ಣುಗಳಲ್ಲಿ, ಮೂರನೆಯದನ್ನು ಅದರ ಹೊಟ್ಟೆಯಲ್ಲಿ, ನಾಲ್ಕನೆಯದನ್ನು ನಾಭಿಯಲ್ಲಿ, ಐದನೆಯ ಪ್ರತಿಮೆಯನ್ನು ಪಾದಗಳಲ್ಲಿಟ್ಟು ಅದೇಕ್ರಮದಲ್ಲಿ ಆಜ್ಯಾಹುತಿ ಕೊಡಲಿಕ್ಕಿರುವ ಮಂತ್ರ—

ಓಂ ಪ್ರೇತವಾಹಾಯ ಸ್ವಾಹಾ । ಪ್ರೇತವಾಹಾಯೇದಂ ನ ಮಮ । —
ಓಂ ಪ್ರೇತಸಖಾಯ ಸ್ವಾಹಾ । ಪ್ರೇತಸಖಾಯೇದಂ ನ ಮಮ ।
ಓಂ ಪ್ರೇತಪಾಯ ಸ್ವಾಹಾ । ಪ್ರೇತಪಾಯೇದಂ ನ ಮಮ ।
ಓಂ ಪ್ರೇತಭೂಮಿಪಾಯ ಸ್ವಾಹಾ। ಪ್ರೇತಭೂಮಿಪಾಯೇದಂ ನ ಮಮ।
ಓಂ ಪ್ರೇತಹರ್ತ್ರ್ಯೈ ಸ್ವಾಹಾ । ಪ್ರೇತಹರ್ತ್ರ್ಯ ಇದಂ ನ ಮಮ ।

ಅನಂತರ ಅದರ ಮೇಲೆ ನೀರಿನ ಧಾರೆಯನ್ನೆರದು ಮೊದಲಿನ ಪ್ರತಿಮೆಗೆ ಆಜ್ಯಾಹುತಿಕೊಡಲಿಕ್ಕಿರುವ ಮಂತ್ರ —

ಓಂ ಯಮಾಯ ಸೋಮಂ ಸುನುತ ಯಮಾಯ ಜುಹುತಾ ಹವಿಃ ।
ಯಮಂ ಹ ಯಜ್ಞೋ ಗಚ್ಛತ್ಯಗ್ನಿದೂತೋ ಅರಙ್ಕೃತಸ್ವಾಹಾ ।
ಯಮಾಯೇದಂ ನ ಮಮ ॥
ಓಂ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ । ಉರ್ವಾ
ರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ಸ್ವಾಹಾ ।
ಮೃತ್ಯುಞ್ಜಯಾಯೇದಂ ನ ಮಮ ॥

ಹೀಗೆ ಈ ಮಂತ್ರಗಳಿಂದ ಪ್ರತಿಯೊಂದು ಪ್ರತಿಮೆಗಳಿಗೂ ಎರಡೆರಡು ಆಜ್ಯಾಹುತಿಗಳನ್ನು ಕೊಟ್ಟು ಪ್ರೇತದ ಬಾಯಿಯಲ್ಲಿ [1] ಪಂಚರತ್ನಗಳನ್ನು ಅಥವಾ ಕೇವಲ ಚಿನ್ನವನ್ನು ಅದೂ ಇಲ್ಲವಾದರೆ ತುಪ್ಪವನ್ನೆರೆದು ದಹನ ವನ್ನು ಮಾಡಬೇಕು.

**[2] ತ್ರಿಪಾದನಕ್ಷತ್ರಗಳಲ್ಲಿ ಮೃತಿಯಾಗಿದ್ದರೆ !!**

ಅಮುಕತ್ರಿಪಾದನಕ್ಷತ್ರಮರಣಸೂಚಿತ ವಂಶಾರಿಷ್ಟವಿನಾಶಾರ್ಥಂ ತದ್ವಿಧಿಂ ಕರಿಷ್ಯೇ । ಎಂದು ಮೃತಪಟ್ಟ ಆಯಾ ನಕ್ಷತ್ರಗಳನ್ನು ಸೇರಿಸಿಕೊಂಡು ಸಂಕಲ್ಪಿಸಿ, [ ಶಿಷ್ಟಾಚಾರಪ್ರಕಾರ, (ಉಪ) ಮೊದಲಿನಂತೆ ಪ್ರಾಯಶ್ಚಿತ್ತಾರ್ಥ ಸ್ವರ್ಣವನ್ನಿಟ್ಟು ] (ಪ್ರಾಚೀ) ಮೂರು ಪ್ರತಿಮೆಗಳನ್ನು ಮಾಡಿ ಪೂಜಿಸಿ

1. ಚಿನ್ನ, ವಜ್ರ, ನೀಲ, ಪದ್ಮರಾಗ, ಮುತ್ತು ಇವು ಪಂಚರತ್ನಗಳು.

2. ಕೃತ್ತಿಕೆ, ಪುನರ್ವಸು, ಉತ್ತರೆ, ವಿಶಾಖೆ, ಉತ್ತರಾಷಾಢ, ಪೂರ್ವಾ-ಭಾದ್ರೆ ಇವು ಆರು ತ್ರಿಪಾದನಕ್ಷತ್ರಗಳು.

ದಹನ ಸಮಯದಲ್ಲಿ ಮೊದಲನೆಯದನ್ನು ಪ್ರೇತದ ಶಿರಸ್ಸಿನಲ್ಲಿ, ಎರಡನೆಯ-ದನ್ನು ಕಣ್ಣುಗಳಲ್ಲಿ, ಮೂರನೆಯದನ್ನು ಹೊಟ್ಟೆಯಲ್ಲಿಟ್ಟು ಅದೇ ಕ್ರಮದಲ್ಲಿ ಮೊದಲಿನಂತೆ ತುಪ್ಪ ಹೋಮಿಸಲಿಕ್ಕಿರುವ ಮಂತ್ರ —

ಓಂ ಪ್ರೇತವಾಹಾಯ ಸ್ವಾಹಾ । ಪ್ರೇತವಾಹಾಯೇದಂ ನ ಮಮ ॥
ಓಂ ಪ್ರೇತಸಖಾಯ ಸ್ವಾಹಾ । ಪ್ರೇತಸಖಾಯೇದಂ ನ ಮಮ ॥
ಓಂ ಪ್ರೇತಪಾಯ ಸ್ವಾಹಾ । ಪ್ರೇತಪಾಯೇದಂ ನ ಮಮ ॥

ಎಂದು ಹೋಮಿಸಿ ಅದರಮೇಲೆ ನೀರಿನ ಧಾರೆಯನ್ನೆರದು,

ಓಂ ಯಮಾಯ ಸೋಮಂ ... .. .. ಕೃತಸ್ಸ್ವಹಾ । ಯಮಾ ಯೇದಂ ನ ಮಮ ।

ಓಂ ತ್ರ್ಯಂಬಕಂ ಯಜಾ ... .. .. ತಾತ್ ಸ್ವಾಹಾ । ಮೃತ್ಯುಂಜ ಯಾಯೇದಂ ನ ಮಮ ।

ಈ ಮಂತ್ರಗಳಿಂದ ಪ್ರತಿಯೊಂದು ಪ್ರತಿಮೆಗೂ ಎರಡೆರಡಾಜ್ಯಾಹುತಿ ಕೊಟ್ಟು,

ಓಂ ವಹ ವಪಾಂ ಜಾತವೇದಃ ಪಿತೃಭ್ಯೋ ಯತ್ರೈನಾನ್ವೇತ್ಥ ನಿಹಿತಾನ್ ಪರಾಕೇ । ಕುಲ್ಯಾ ಉಗ್ರ ತಾಃ ಕ್ಷರಂತು ಸತ್ಯಾ ಏತಾ ಆಶಿಷಸ್ಸಂತು ಕಾಮೈ ಸ್ಸ್ವಹಾ ॥ ಅಗ್ನಯೇ ಜಾತವೇದಸ ಇದಂ ನ ಮಮ ॥ ಎಂದೆಲ್ಲಾ ಪ್ರತಿಮೆ ಗಳಿಗೂ ಒಂದೊಂದಾಜ್ಯಾಹುತಿ ಕೊಟ್ಟು ದಹಿಸಬೇಕು.

### ತ್ರಿ[1] ಪುಷ್ಕರ ದ್ವಿ[2] ಪುಷ್ಕರಗಳಲ್ಲಿ ಮೃತವಾದರೆ !!!

ಕರ್ತೃವು (ಉಪ) ದೇಶ, ಕಾಲಾದಿಗಳನ್ನುಚ್ಚರಿಸಿ (ಪ್ರಾಚೀ) .. ..

1. ಬಿದಿಗೆ, ಸಪ್ತಮಿ, ದ್ವಾದಶಿ ತಿಥಿಗಳು ರವಿ, ಕುಜ, ಶನಿವಾರಗಳಿಂದಲೂ, ತ್ರಿಪಾದನಕ್ಷತ್ರಗಳಿಂದಲೂ, ಕೂಡಿದ್ದರೆ ತ್ರಿಪುಷ್ಕರಯೋಗವಾಗುವುದು.

2. ಈ ತಿಥಿ, ವಾರ, ನಕ್ಷತ್ರಗಳಲ್ಲಿ ಎರಡು ಮಾತ್ರ ಕೂಡಿದ್ದರೆ ದ್ವಿಪುಷ್ಕರ ಯೋಗವಾಗುವುದು. ಮೊದಲು ಹೇಳಿದ ತಿಥಿವಾರಗಳು, ದ್ವಿಪಾದನಕ್ಷತ್ರಗಳಾದ ಮೃಗಶಿರೆ, ಚಿತ್ರೆ, ಧನಿಷ್ಠೆ, ಇವುಗಳಿಂದ ಕೂಡಿದ್ದರೂ ದ್ವಿಪುಷ್ಕರಯೋಗವಾಗುವು ದೆಂದು ಪಕ್ಷಾಂತರ.

ಗೋತ್ರಸ್ಯ ..... ... ಪ್ರೇತಸ್ಯ ಅಮುಕತ್ರಿಪುಷ್ಕರಯೋಗೇ (ದ್ವಿಪುಷ್ಕರ ಯೋಗೇ ವಾ) ಮರಣಸೂಚಿತ ವಂಶಾರಿಷ್ಟವಿನಾಶಾರ್ಥಂ ಕೃಚ್ಛ್ರತ್ರಯಪ್ರಾಯಶ್ಚಿತ್ತಂ ಯಥಾಶಕ್ತಿ ದ್ರವ್ಯದಾನದ್ವಾರಾಹಮಾಚರಿಷ್ಯೇ । ಎಂದು ಸಂಕಲ್ಪಿಸಿ (ಉಪ) ತುಳಸಿ, ದರ್ಭೆ ಮತ್ತು ಯಥಾಶಕ್ತಿ ಸುವರ್ಣವನ್ನೂ ಕೂಡ ಎಳ್ಳಿನೊಂದಿಗೆ

ತೆಗೆದು, ಅನಾದಿನಿಧನೋ ..... ... ಭವ ॥ ಎಂದು ಹೇಳಿ ಮೊದಲಿನಂತೆ ಇಟ್ಟು ನಮಸ್ಕರಿಸಿ (ಪ್ರಾಚೀ) ಭೋ ಬ್ರಾಹ್ಮಣಾಃ ಮಯಾ ವಿನಿಹಿತಾಂ ಯಥಾಶಕ್ತಿ ದಕ್ಷಿಣಾಂ ಯಥೋಕ್ತದಕ್ಷಿಣಾಮಿವ ಸ್ವೀಕೃತ್ಯ ... .. ಗೋತ್ರಸ್ಯ ... ... ಪ್ರೇತಸ್ಯ ತ್ರಿಪುಷ್ಕರಯೋಗೇ (ದ್ವಿಪುಷ್ಕರಯೋಗೇ ವಾ) ಮರಣಸೂಚಿತ ವಂಶಾರಿಷ್ಟನಿವಾರಣಮಸ್ತ್ವಿತಿ ಭವಂತೋಽನುಗೃಹ್ಣಂತು — ಎಂದು ಹೇಳಿ "ಅಸ್ತು" ಎಂಬ ಅನುಜ್ಞೆಯನ್ನು ಪಡೆದು (ಉಪ) ದೇಶಕಾಲಗಳನ್ನು ಹೇಳಿ (ಪ್ರಾಚೀ) ______ ಗೋತ್ರಸ್ಯ ______ ಪ್ರೇತಸ್ಯ ಅಮುಕತ್ರಿಪುಷ್ಕರ (ದ್ವಿಪುಷ್ಕರ) ಯೋಗಮರಣ ಸೂಚಿತವಂಶಾರಿಷ್ಟವಿನಾಶಾರ್ಥಂ ತ್ರಿಪುಷ್ಕರ (ದ್ವಿಪುಷ್ಕರ) ವಿಧಿಂ ಕರಿಷ್ಯೇ । ಎಂದು ಸಂಕಲ್ಪಿಸಿ ತ್ರಿಪಾದನಕ್ಷತ್ರಮರಣದ ಪ್ರಕರಣದಲ್ಲಿ ಹೇಳಿದ ರೀತಿಯಲ್ಲೇ ಮೂರು ಪ್ರತಿಮೆಗಳನ್ನು ಮಾಡಿ ಆಜ್ಯಾಹುತಿವರೆಗಿನ ಎಲ್ಲಾ ಕೆಲಸಗಳನ್ನೂ, ಕ್ರಮಪ್ರಕಾರ ಮಾಡಬೇಕು.

ದ್ವಿಪುಷ್ಕರಯೋಗದಲ್ಲಾದರೆ – ಎರಡು ಪ್ರತಿಮೆಗಳನ್ನು ಮಾಡಿ ಪ್ರೇತದ ತಲೆಯಲ್ಲೂ, ಕಣ್ಣುಗಳಲ್ಲಿಯೂ, ಇಟ್ಟು —

ಓಂ ಪ್ರೇತವಾಹಾಯ ಸ್ವಾಹಾ । ಪ್ರೇತವಾಹಾಯೇದಂ ನ ಮಮ ॥

ಓಂ ಪ್ರೇತಸಖಾಯ ಸ್ವಾಹಾ । ಪ್ರೇತಸಖಾಯೇದಂ ನ ಮಮ ॥

ಎಂಬ ಈ ಎರಡು ಮಂತ್ರಗಳಿಂದ ಮೊದಲಿನ ಹಾಗೆ ತುಪ್ಪವನ್ನು ಹೋಮಿಸಿ ಉಳಿದೆಲ್ಲಾ ಕೆಲಸವನ್ನು ಮೊದಲುಹೇಳಿದ ರೀತಿಯಲ್ಲೇ ಮಾಡಬೇಕು.

ಶ್ರೀಃ ಶ್ರೀಃ

---

ಅನಂತರ [ಆಚಾರದಂತೆ, ಕಾಷ್ಠಕ್ಕೆ ಸೊಪ್ಪು, ಸೌದೆ, ಗೂಟೆ ಮೊದಲಾದವುಗಳನ್ನು ದಹನಕ್ಕನುಕೂಲವಾಗುವಂತಿಟ್ಟು,] ಕರ್ತೃವು ಕೂಟೆಯನ್ನು

ಆ ಅಗ್ನಿಯಿಂದ ಹೊತ್ತಿಸಿ ಪುರುಷಶವವಾದರೆ ಶಿರೋದೇಶದಲ್ಲೂ, ಸ್ತ್ರೀಶವವಾದರೆ ಪಾದದೇಶದಲ್ಲೂ ಬೆಂಕಿಕೊಡಲಿಕ್ಕಿರುವ ಮಂತ್ರ —

ಕ್ರವ್ಯಾದಮಿತಿ ದಮನೋಽಗ್ನಿಸ್ತ್ರಿಷ್ಟುಪ್ ಅಗ್ನಿ ಪ್ರಜ್ವಾಲನೇ ವಿನಿಯೋಗಃ —

ಓಂ ಕ್ರವ್ಯಾದಮಗ್ನಿಂ ಪ್ರಹಿಣೋಮಿ ದೂರಂ ಯಮರಾಜ್ಞೋ ಗಚ್ಛತು ರಿಪ್ರವಾಹಃ । ಇಹೈವಾಯಮಿತರೋ ಜಾತವೇದಾ ದೇವೇಭ್ಯೋ ಹವ್ಯಂ ವಹತು ಪ್ರಜಾನನ್ ॥

ತ್ವಂ ಭೂತಕೃಜ್ಜಗದ್ಯೋನೇ ತ್ವಂ ಲೋಕಪರಿಪಾಲಕಃ । ಉಕ್ತಸ್ಸಂಹಾರಕಸ್ತಸ್ಮಾದೇನಂ (ನಾಂ) ಸ್ವರ್ಗಂ ಮೃತಂ (ತಾಂ) ನಯ ॥

ಎಂದು ಸುತ್ತಲೂ ಪ್ರಜ್ವಾಲಿಸಿ ಬಟ್ಟೆಯಿಂದ ಕಾಷ್ಠಕ್ಕೆ ಗಾಳಿ ಬೀಸಲಿಕ್ಕಿರುವ ಮಂತ್ರಗಳು —

ಓಂ ವಾತಾಸ್ತೇವಾಂತು ಪಥಿ ಪುಣ್ಯಗಂಧಾ ______ ಲೋಕಾಃ ॥

ಇಮಾ ಆಪೋ ಮಧುಮತ್ಯೋಽಸ್ಮಿಂಸ್ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಸ್ಸ್ವಧಾ ನಮಃ ॥ ಇಮಾ ಆಪೋ ಮಧುಮತ್ಯೋಂತರಿಕ್ಷೇ ತೇ ಲೋಕ ಉಪದುಹ್ಯಂತಾಮಕ್ಷೀಯಮಾಣಾಸ್ಸ್ವಧಾ ನಮಃ ॥ ಇಮಾ ಆಪೋಮಧುಮತ್ಯಸ್ಸ್ವರ್ಗೇ ತೇ ಲೋಕ ಉಪದುಹ್ಯಂತಾ ಮಕ್ಷೀಯಮಾಣಾಸ್ಸ್ವಧಾ ನಮಃ ॥

ಎಂದು ಸುತ್ತಲೂ ಚೆನ್ನಾಗಿ ಬೀಸಿ, ದಹಿಸುತ್ತಿರುವ ಪ್ರೇತಕ್ಕೆ ಎಳ್ಳನ್ನೀರ ಚುತ್ತಾ ಹೇಳಲಿಕ್ಕಿರುವ ಮಂತ್ರಗಳು —

ಪ್ರೇಹಿಪ್ರೇಹೀತಿ ದ್ವಯೋರ್ಯಮಃ ಪಿತರಸ್ತ್ರಿಷ್ಟುಪ್ ದಹ್ಯಮಾನಪ್ರೇತಾನುಮಂತ್ರಣೇ ವಿನಿಯೋಗಃ —

ಓಂ ಪ್ರೇಹಿ ಪ್ರೇಹಿ ಪಥಿಭಿಃ ಪೂರ್ವ್ಯೇಭಿರ್ಯತ್ರಾ ನಃ ಪೂರ್ವೇ ಪಿತರಃ ಪರೇಯುಃ । ಉಭಾ ರಾಜಾನಾಸ್ವಧಯಾ ಮದಂತಾ ಯಮಂ ಪಶ್ಯಾಸಿ ವರುಣಂ ಚ ದೇವಂ ॥ ಸಂಗಚ್ಛಸ್ವ ಪಿತೃಭಿಸ್ಸಂಯಮೇನೇಷ್ಟಾ ಪೂರ್ತೇನ ಪರಮೇ ವ್ಯೋಮನ್ । ಹಿತ್ವಾ ಯಾವದ್ಯಂ ಪುನರಸ್ತ ಮೇಹಿ ಸಂಗಚ್ಛಸ್ವ ತನ್ವಾ ಸುವರ್ಚಾಃ ॥

ಅತಿದ್ರವೇತಿ ದ್ವಯೋರ್ಯಮಶ್ವಾನೌ ತ್ರಿಷ್ಟುಪ್ ದಹ್ಯಮಾನ ಪ್ರೇತಾನು ಮಂತ್ರಣೇ ವಿನಿಯೋಗಃ —

ಓಂ ಅತಿದ್ರವ ಸಾರಮೇಯೌ ಶ್ವಾನೌ ______ ಸಧಮಾದಂ ಮದಂತಿ ॥ ಯೌತೇ ಶ್ವಾನೌ ಯಮರಕ್ಷಿತಾರೌ ______ ಅನಮೀವಂಚ ಧೇಹಿ ॥ ಮೈನಮಿತಿ ಷಣ್ಣಾಂ ದಮನೋಽಗ್ನಿಸ್ತ್ರಿಷ್ಟುಪ್ ದಹ್ಯ ______ ಗಃ —

ಓಂ ಮೈನಮಗ್ನೇ ವಿದಹೋ ಮಾಭಿಶೋಚೋ ಮಾಸ್ಯ ತ್ವಚಂ ಚಿಕ್ಷಿಪೋ ಮಾ ಶರೀರಂ । ಯದಾ ಶೃತಂ ಕೃಣವೋ ಜಾತವೇದೋಥೇ ಮೇನಂ ಪ್ರಹಿಣುತಾತ್ಪಿತೃಭ್ಯಃ ॥ ೧ ॥ ಶೃತಂ ಯದಾ ಕರಸಿಜಾತ ವೇದೋಥೇಮೇನಂ ಪರಿ ದತ್ತಾತ್ಪಿತೃಭ್ಯಃ । ಯದಾ ಗಚ್ಛಾತ್ಯಸುನೀತಿ ಮೇತಾಮಥಾ ದೇವಾನಾಂ ವಶನೀರ್ಭವಾತಿ ॥ ೨ ॥ ಸೂರ್ಯಂ

ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ। ಅಪೋ ವಾ ಗಚ್ಛ ಯದಿ ತತ್ರ ತೇ ಹಿತಮೋಷಧೀಷು ಪ್ರತಿತಿಷ್ಠಾ ಶರೀರೈಃ ॥ ೩ ॥ ಅಜೋ ಭಾಗಸ್ತಪಸಾ ತಂ ತಪಸ್ವ ತಂ ತೇ ಶೋಚಿಸ್ತಪತು ತಂ ತೇ ಅರ್ಚಿಃ । ಯಾಸ್ತೇ ಶಿವಾಸ್ತನ್ವೋ ಜಾತ ವೇದಸ್ತಾಭಿರ್ವಹೈನಂ ಸುಕೃತಾಮು ಲೋಕಂ ॥ ೪ ॥ ಅವಸೃಜ ಪುನರಗ್ನೇ ಪಿತೃಭ್ಯೋ ಯಸ್ತ ಆಹುತಶ್ಚರತಿ ಸ್ವಧಾಭಿಃ । ಆಯುರ್ವ ಸಾನಉಪವೇತು ಶೇಷಸ್ಸಂಗಚ್ಛತಾಂ ತನ್ವಾ ಜಾತವೇದಃ ॥ ೫ ॥ ಯತ್ತೇ ಕೃಷ್ಣಶ್ಶಕುನ ಆತುತೋದ ಪಿಪೀಲಸ್ಸರ್ಪ ಉತ ವಾ ಶ್ವಾಪದಃ । ಅಗ್ನಿಷ್ಟದ್ವಿಶ್ವಾದಗದಂ ಕೃಣೋತು ಸೋಮಶ್ಚ ಯೋ ಬ್ರಾಹ್ಮಣಾಆವಿವೇಶ ॥ ೬ ॥ ಪೂಷಾತ್ವೇತಿ ಚತಸೃಣಾಂ ದೇವ ಶ್ರವಾಃ ಪೂಷಾ ತ್ರಿಷ್ಟುಪ್ ದಹ್ಯೆ ________ ಗಃ —

ಓಂ ಪೂಷಾ ತ್ವೇತಶ್ಚ್ಯಾವಯತು ಪ್ರ ವಿದ್ವಾನನಷ್ಟ ಪಶುರ್ಭುವ ನಸ್ಯ ಗೋಪಾಃ । ಸ ತ್ವೈತೇಭ್ಯಃ ಪರಿದದತ್ಪಿತೃಭ್ಯೋಽಗ್ನಿರ್ದೇವೇಭ್ಯಸ್ಸುವಿ ದತ್ರಿಯೇಭ್ಯಃ ॥ ೧ ॥ ಆಯುರ್ವಿಶ್ವಾಯುಃ ಪರಿಪಾಸತಿ ತ್ವಾ ಪೂಷಾ ತ್ವಾ ಪಾತು ಪ್ರಪಥೇ ಪುರಸ್ತಾತ್ । ಯತ್ರಾಸತೇ ಸುಕೃತೋ ಯತ್ರ

ತೇ ಯಯುಸ್ತತ್ರ ತ್ವಾ ದೇವಸ್ಸವಿತಾ ದಧಾತು ॥ ೨ ॥ ಪೂಷೇಮಾ
ಆಶಾಽಅನುವೇದ ಸರ್ವಾಸ್ಸೋಽಅಸ್ಮಾ ಅಭಯತಮೇನನೇಷತ್ ।
ಸ್ವಸ್ತಿದಾಽಆಘೃಣಿಸ್ಸರ್ವವೀರೋ ಪ್ರಯಚ್ಛನ್ ಪುರ ಏತು ಪ್ರಜಾ
ನನ್ ॥ ೩ ॥ ಪ್ರಪಥೇ ಪಥಾಮಜನಿಷ್ಟ ಪೂಷಾ ಪ್ರಪಥೇ ದಿವಃ
ಪ್ರಪಥೇ ಪೃಥಿವ್ಯಾಃ । ಉಭೇ ಅಭಿ ಪ್ರಿಯತಮೇ ಸಧಸ್ಥ ಆ ಚ ಪರಾ
ಚ ಚರತಿ ಪ್ರಜಾನನ್ ॥ ೪ ॥ ಉಪಸರ್ಪೇತಿ ಚತಸೃಣಾಂ ಸಂಕು

ಸುಕಃ ಪಿತೃಮೇಧಾಸ್ತ್ರಿಷ್ಟುಪ್ ದ್ವಿತೀಯಾಪ್ರಸ್ತಾರಪಙ್ಕ್ತಿಃ ಚತುರ್ಥೀ
ಜಗತೀ ದಹ್ಯ _______ ಗಃ —

ಓಂ ಉಪಸರ್ಪ ಮಾತರಂ ಭೂಮಿಮೇತಾಮುರು ವ್ಯಚಸಂ ಪೃಥಿವೀಂ
ಸುಶೇವಾಂ । ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು
ನಿರ್ಋತೇರುಪಸ್ಥಾತ್ ॥ ೧ ॥ ಉಚ್ಛ್ವಂಚಸ್ವ ಪೃಥಿವಿ ಮಾ
ನಿಬಾಧಥಾಸ್ಸೂಪಾಯನಾಸ್ಮೈ ಭವ ಸೂಪವಂಚನಾ । ಮಾತಾ ಪುತ್ರಂ
ಯಥಾಸಿಚಾಭ್ಯೇನಂ ಭೂಮ ಊರ್ಣುಹಿ ॥ ೨ ॥ ಉಚ್ಛ್ವಂಚ
ಮಾನಾ ಪೃಥಿವೀ ಸುತಿಷ್ಠತು ಸಹಸ್ರಂ ಮಿತ ಉಪ ಹಿ ಶ್ರಯಂತಾಂ ।
ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾಸ್ಮೈ ಶರಣಾ

ಸ್ಸಂತ್ವತ್ರ ॥ ೩ ॥ ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ ಲೋಗಂ ನಿವಧನ್ಮೋSಅಹಂ ರಿಷಂ । ಏತಾಂ ಸ್ಥೂಣಾಂ ಪಿತರೋ ಧಾರಯಂ ತೇತ್ರಾ ಯಮಸ್ಸಾದನಾ ತೇ ಮಿನೋತು ॥ ೪ ॥

ಸೋಮ ಏಕೇಭ್ಯ ಇತಿ ಪಂಚಾನಾಂ ಯಮೋ ಭಾವವೃತ್ತೋSನುಷ್ಟಪ್ ದಹ್ಯೆ ____ ಗಃ ___

ಓಂ ಸೋಮ ಏಕೇಭ್ಯಃ ಪವತೇ ಘೃತಮೇಕ ಉಪಾಸತೇ । ಯೇಭ್ಯೋ ಮಧು ... ತಿ ತಾಂಶ್ಚಿದೇವಾಪಿ ಗಚ್ಛತಾತ್ ॥ ತಪಸಾ ಯೇ ಅನಾಧೃ... ಸಾ ಯೇ ಸ್ವರ್ಯಯುಃ । ತಪೋ ಯೇ ಚಕ್ರಿರೇ ಮಹಸ್ತಾಂಶ್ಚಿ... ಚ್ಛತಾತ್ । ಯೇ ಯುಧ್ಯಂತೇ ಪ್ರಧನೇಷು ಶೂರಾಸೋ ಯೇ ... ಜಃ ಯೇ ವಾ ಸಹಸ್ರದಕ್ಷಿಣಾಸ್ತಾಂಶ್ಚಿದೇವಾಪಿ ಗಚ್ಛತಾತ್ ॥ ಯೇ ಚಿತ್ಪೂರ್ವ ಋತಸಾಪಋತಾವಾನಋತಾವೃಧಃ । ಪಿತೄನ್ತಪಸ್ವತೋ ಯಮ ತಾಂಶ್ಚಿದೇವಾಪಿ ಗಚ್ಛತಾತ್ ॥ ಸಹಸ್ರಣೀಥಾಃ ಕ ಯೋ ಯೇ ಗೋಪಾಯಂತಿ ಸೂರ್ಯಂ । ಋಷೀನ್ತಪಸ್ವತೋ ಯಮತಪೋಜಾಽಅಪಿ ಗಚ್ಛತಾತ್ ॥ ಉರೂಣಸಾವಿತ್ಯಸ್ಯ ಯಮ ಶ್ವಾನೌ ತ್ರಿಷ್ಟುಪ್ ದಹ್ಯೆ ______ ಗಃ ___

ಓಂ ಉರೂಣಸಾವಸುತೃಪಾ ಉದುಂಬಲೌ ಯಮಸ್ಯ ದೂತೌ

ಚರತೋ ಜನ್ಾಂ ಅನು । ತಾವಸ್ಮಭ್ಯಂ ದೃಶಯೇ ಸೂರ್ಯಾಯ ಪುನ

ರ್ದಾತಾ ವಸುಮದ್ಯೇಹ ಭದ್ರಂ ॥

ಎಂದು ಹೇಳಿ ಕಪಾಲಮೋಕ್ಷದ (ಮುಕ್ಕಾಲಂಶವೂ ದಹನವಾದ) ಅನಂತರ ಕರ್ತೃವು ಎಡಹೆಗಲಿನಲ್ಲಿ ತಾನು ಜಲಶುದ್ಧಿಮಾಡಿದ ಮಣ್ಣಿನ ಪಾತ್ರವನ್ನು ಹೊತ್ತು ಶ್ಮಶಾನದಲ್ಲಿದ್ದ ಹೆಚ್ಚು ದೊಡ್ಡದಲ್ಲದ ಮತ್ತು ಹುಡಿಯಾಗದ ಒಂದು ನುಣುಪಾದಕಲ್ಲನ್ನು ತೆಗೆದು ಅದರಿಂದ ಜಲಪಾತ್ರದ ಪೃಷ್ಠಭಾಗದಲ್ಲಿ ಒಂದು ತೂತುಮಾಡಿ ಪ್ರೇತದ ಪಾದದೇಶದಿಂದ ತೊಡಗಿ ಪುನಃ ಅಲ್ಲಿಯವರೆಗೆ ಜಲ ಧಾರೆಯನ್ನೆರೆಯುತ್ತಾ ಅಪ್ರದಕ್ಷಿಣಬರಲಿಕ್ಕಿರುವ ಮಂತ್ರ —

ಓಂ ವಾತಾಸ್ತೇ ವಾಂತು ಪಥಿ ಪುಣ್ಯ ಗಂಧಾ ____ ಲೋಕಾಃ ॥

ಇಮಾ ಆಪೋ ಮಧುಮತ್ಯೋಽಸ್ಮಿಂಸ್ತೇ ಲೋಕ ಉಪದುಹ್ಯಂತಾ ಮಕ್ಷೀ

ಯಮಾಣಾಸ್ಸ್ವಧಾ ನಮಃ ॥

ಎಂದು ಅಪ್ರದಕ್ಷಿಣ ಬಂದು [ಆಚಾರದಂತೆ, ಪ್ರೇತದ ಪಾದದೇಶಕ್ಕೆ ಗೋತ್ರ, ನಾಮಗಳನ್ನು ಸೇರಿಸಿ ತಿಲೋದಕವನ್ನು ಕೊಡಬೇಕು. ಹೀಗೆ ಎರಡನೇಸುತ್ತಿನಲ್ಲಿ ಮಧ್ಯದೇಶಕ್ಕೂ, ಮೂರನೇಸುತ್ತಿನಲ್ಲಿ ಶಿರೋದೇಶಕ್ಕೂ, ತಿಲೋದಕಕೊಡುವದು. ] ಪುನಃ ಅಲ್ಲಿಯೇ ನಿಂತು ಅದೇ ಕಲ್ಲಿನಿಂದ ಎರಡನೆಯ ತೂತನ್ನುಮಾಡಿ ಜಲಧಾರೆಯಿಂದೊಡಗೂಡಿ ಅಪ್ರದಕ್ಷಿಣಬರುತ್ತಾ.

ಓಂ ವಾತಾಸ್ತೇ ವಾಂತು ಪಥಿ ಪುಣ್ಯ ಗಂಧಾ ____ ಲೋಕಾಃ ॥

ಇಮಾ ಆಪೋ ಮಧುಮತ್ಯೋಂತರಿಕ್ಷೇ ತೇ ಲೋಕ ಉಪದುಹ್ಯಂತಾ

ಮಕ್ಷೀಯಮಾಣಾಸ್ಸ್ವಧಾ ನಮಃ ||

ಎಂಬ ಮಂತ್ರವನ್ನು ಹೇಳಿ ಪುನಃ ಅದೇ ರೀತಿಯಲ್ಲಿ ಮೂರನೆಯ ತೂತನ್ನು ಮಾಡಿ ಜಲಧಾರೆಯಿಂದೊಡಗೂಡಿ ಅಪ್ರದಕ್ಷಿಣಬರುತ್ತಾ —

ಓಂ ವಾತಾಸ್ತೇ ವಾಂತು ಪಥಿ ಪುಣ್ಯಗಂಧಾ ____ ಲೋಕಾಃ || ಇಮಾ ಆಪೋ ಮಧು ಮತ್ಯಸ್ಸ್ವರ್ಗೇ ತೇ ಲೋಕ ಉಪದುಹ್ಯಂತಾಮಕ್ಷೀಯ ಮಾಣಾಸ್ಸ್ವಧಾ ನಮಃ ||

ಎಂಬ ಮಂತ್ರವನ್ನು ಹೇಳಿ ಶಿರೋದೇಶದಲ್ಲೇ (ಸ್ತ್ರೀಯರಾಗಾದರೆ ಪಾದ ದೇಶದಲ್ಲೇ). ಆ ಪಾತ್ರವನ್ನೊಡೆದು, ಪಾತ್ರವನ್ನು ತೂತುಮಾಡಿದ ಆ ಶಿಲೆಯನ್ನು ಕೈಯಲ್ಲಿ ಹಿಡಿದುಕೊಂಡು ದಕ್ಷಿಣಾಭಿಮುಖನಾಗಿ, ಇಮೇಜೀವಾಸ್ಸಂಕು ಸುಕೋ ಮೃತ್ಯುಸ್ತ್ರಿಷ್ಟುಪ್ ಸವ್ಯಮಾವೃತ್ಯ ಗಮನೇ ವಿನಿಯೋಗಃ —

ಓಂ ಇಮೇ ಜೀವಾ ವಿಮೃತೈರಾವವೃತ್ರನ್ನ ಭೂದ್ಭದ್ರಾ ದೇವಹೂತಿ ರ್ನೋಽಅದ್ಯ | ಪ್ರಾಂಚೋ ಅಗಾಮ ನೃತಯೇಹಸಾಯ ದ್ರಾಘೀಯ ಆಯುಃ ಪ್ರತರಂ ದಧಾನಾಃ ||

ಈ ಮಂತ್ರವನ್ನು ಹೇಳುತ್ತಾ ಹಿಂತಿರುಗಿ ನೋಡದೆ ಸಣ್ಣವರು ಮುಂದಾಗಿ ಎಡಭಾಗಕ್ಕೆ ತಿರುಗಿ ( ಅಪ್ರದಕ್ಷಿಣಬಂದು ) ಶ್ಮಶಾನದಿಂದ ಸರ್ವರೂ ಹೊರಟು ಸೂರ್ಯ, ನಕ್ಷತ್ರ, ದಿಕ್ಕುಗಳನ್ನು ನೋಡಿ ಸ್ತ್ರೀಬಾಲಪುರಸ್ಸರರಾಗಿ ಮಹಾ ನದಿಯಲ್ಲಿರುವ ದೊಡ್ಡ ಮಡುವಿನಲ್ಲಿ ಎಲ್ಲರೂ ಮುಂದೆಹೇಳುವ ಸ್ನಾನದ ರೀತಿಯಲ್ಲಿ ಮಿಂದಾಯಬೇಕು. ಕುಟುಂಬಸ್ಥರಲ್ಲದವರು ಹದಿಮೂರುಸಲ ನೀರಿನಲ್ಲಿ

ಮುಳುಗಿ ಆಚಮನಮಾಡಿ ಪುನಃ ವಿಧಿಪ್ರಕಾರಮಿಂದು ಅಗ್ನಿಸ್ಪರ್ಶನವನ್ನುಮಾಡಿ, ತುಪ್ಪವನ್ನು ಕುಡಿದು ಪುನರಪಿ ಸ್ನಾನವನ್ನು ಮಾಡಿದರೆ ಶುದ್ಧರಾಗುವರು.

## ಸ್ನಾನದರೀತಿ.

ಆಮೇಲೆ; ಕರ್ತೃವೂ, ಸಪಿಂಡರೂ ಸೋದಕರೂ, ಸಗೋತ್ರಿಗಳೂ, ಹೆಂಗಸರೂ ಕೂಡ ತಲೆಜುಟ್ಟು ಬಿಡಿಸಿ ಒಂದೊಂದೇ ಬಟ್ಟೆಗಳನ್ನುಟ್ಟು ತೆಂಕು ಮುಖಮಾಡಿ ಮೈಯನ್ನೂ, ಮೊದಲುಟ್ಟ ಬಟ್ಟೆಯನ್ನೂ ಕೂಡ ತೊಳೆದು ಹಿಂಡಿ ಏಳುಸಲ ಗಾಳಿಯಲ್ಲಿ ಕೊಡಹಿ ಒಣಗಿದ ಭಾವದಿಂದ ಪುನಃ ಅದನ್ನೇ ಉಟ್ಟು ಕನಿಷ್ಠಪ್ರಥಮರಾಗಿಯೇ ಎಲ್ಲರೂ ಒಟ್ಟಿಗೆ ಮುಳುಗಿ ಬ್ರಾಹ್ಮಣರು, "ಅಪನಶ್ಶೋಶುಚದಘ ____ ದಘಂ || ಎಂಬ ಸೂಕ್ತವನ್ನು ಹೇಳುತ್ತಿರುವಾಗ ಎಡಕ್ಕೈಯ ಅನಾಮಿಕೆಬೆರಳಿನಿಂದ ಜಲಾವಲೋಡನವನ್ನು ಮಾಡಿ, ಸಚೇಲಸ್ನಾನ, ಆಚಮನಗಳನ್ನು ಮಾಡಿ ನೀರಿನಿಂದ ಮೇಲಕ್ಕೆ ಹತ್ತಿ, ಶುದ್ಧವಾದ ಸ್ಥಳದಲ್ಲಿ ದಕ್ಷಿಣಾಗ್ರವಾಗಿ ದರ್ಭೆಪಸರಿಸಿ, ಶ್ಮಶಾನದಲ್ಲಿ ಪಾತ್ರವನ್ನು ತೂತುಮಾಡಿದ ಆ ಪ್ರೇತಶಿಲೆಯನ್ನು ಅದರಲ್ಲಿಟ್ಟು ಎಡಕ್ಕೈಯಿಂದೊಡಗೂಡಿದ ಬಲಕ್ಕೈಯ ಪಿತೃತೀರ್ಥ (ತರ್ಜನೀ ಅಂಗುಷ್ಠಗಳ ಮಧ್ಯಭಾಗ) ದಲ್ಲಿ ಎಲ್ಲರೂ ಒಟ್ಟಿಗೆ ಅಯುಗ್ಮರಾಗಿ ಪ್ರಾಚೀನಾವೀತಿಗಳಾಗಿ __ ಗೋತ್ರ _ ಪ್ರೇತ ಏಷ ತಿಲತೋಯಾಂಜಲಿಸ್ತ್ವಾಮುಪತಿಷ್ಠತು' । ಎಂದು ಒಂದೊಂದು ಸಲ ತಿಲತೋಯಾಂಜಲಿಯನ್ನು ಕೊಡಬೇಕು.

---

1 ತಿಲಾಂಜಲಿ ದಾನವಿಚಾರ.

ಬ್ರಹ್ಮಚಾರಿಯಾಗಿದ್ದರೆ ; ತಾಯಿ, ತಂದೆ, ಗುರು, ವೇದವನ್ನುಪದೇಶಿಸಿದ ಆಚಾರ್ಯ, ತಾಯಿಯತಂದೆ, ತಾಯಿಯತಾಯಿ ಇವರಿಗೆ ಮಾತ್ರ ಈ ತಿಲಾಂಜಲಿಯನ್ನು ಕೊಡಬಹುದಷ್ಟೆ ಹೊರತು ಬೇರೆ ಯಾರಿಗೂ ಕೊಡಬಾರದು.

ಶವವಾಹಕರೇ ಮೊದಲಾದ ಸಪಿಂಡ, ಸೋದಕಾದಿಗಳೂ ಈ ತಿಲಾಂಜಲಿಯನ್ನು ಕೊಡಬೇಕು. ಸ್ನೇಹಿತರು ಕೊಟ್ಟರೂ, ಕೊಡದಿದ್ದರೂ ಆಗಬಹುದು. ಕೊಡುತ್ತಿದ್ದರೂ ಆ ಪ್ರೇತಶಿಲೆಗೇನೇ ಆಗಬೇಕೆಂಬ ನಿಯಮವಿಲ್ಲ. ಪತಿತರೂ, ಗರ್ಭಾಧಾನಾದಿ ಸಂಸ್ಕಾರಹೀನರೂ ಕೂಡ ಕೊಡಲೇಬಾರದು.

ಅಮೇಲೆ ಕರ್ತೃವು .... ಗೋತ್ರ ... ಪ್ರೇತ ದಾಹಜನಿತತೃಷೋಪಶಮ ನಾರ್ಥಂ ಇದಂ ತೇ ವಾಸೋದಕಂ ದದಾಮಿ । ಎಂದು ಮುಮ್ಮಡಿಯಾದ ಉತ್ತರೀಯೋದಕವನ್ನು, ಕುಳಿತು ಹಿಂಡಬೇಕು. ಅನಂತರ ಆ ಶಿಲೆಯನ್ನು ಬೇರೆ ಶುದ್ಧವಾದ ಸ್ಥಳದಲ್ಲಿ ಜಾಗ್ರತೆಯಾಗಿಟ್ಟು ಎಲ್ಲಾ ಸಪಿಂಡಾದಿಗಳೂ, ಶವಸ್ಪರ್ಶಿಗಳೂ ಕೂಡ ಬೇರೆ ಬಟ್ಟೆಗಳನ್ನುಟ್ಟು ಒದ್ದೆಯಾದ ಬಟ್ಟೆಗಳನ್ನು ಒಂದೊಂದು ಸಲ ಹಿಂಡಿ, ಒಣಗಲು ಬಡಗುತುದಿಮಾಡಿ ಬಿಡಿಸಿ (ಆರಿಸು ವುದು. ಹಗಲು ದಹನಮಾಡಿದರೆ ನಕ್ಷತ್ರದರ್ಶನದವರೆಗೂ, ರಾತ್ರಿ ದಹನ ಮಾಡಿದರೆ ಸೂರ್ಯೋದಯದವರೆಗೂ ಅಲ್ಲಿಯೇ ವಾಸಮಾಡಬೇಕೆಂದು ಶಾಸ್ತ್ರವಚನವಿದೆ.) ಸಣ್ಣವರು ಮೊದಲಾಗಿಯೂ ದೊಡ್ಡದೊಡ್ಡವರು ಹಿಂದು ಹಿಂದಾಗಯೂ ಮನೆಗೆಹೋಗಿ ದ್ವಾರದೇಶದಲ್ಲಿ ಕಹಿಬೇವಿನ ಸೊಪ್ಪನ್ನು ಜಗಿ ದುಗುಳಿ ಆಚಮನಮಾಡಿ ಅಗ್ನಿ, ಕಲ್ಲು, ಗೋಮಯ, ಅಕ್ಷತ, ಎಳ್ಳು, ನೀರು, ದೂರ್ವೆ (ಗರುಕೆ), ಎತ್ತು, ಸಾಸಿವೆ ಇವುಗಳೆಲ್ಲವನ್ನೂ ಯಾ ಸಿಕ್ಕದಿದ್ದರೆ ಅಗ್ನಿ, ಗೋಮಯ ಮೊದಲಾದುವುಗಳನ್ನಾದರೂ ಒಂದೊಂದಾಗಿ ಹಿಡಿಯು ವುದರಿಂದ ಹಸ್ತಗಳನ್ನು ಶುದ್ಧಿಮಾಡಿಕೊಂಡು ಕುಪ್ಪವನ್ನು ಸೇವಿಸಬೇಕು. [ಶಿಷ್ಟಾಚಾರದಂತೆ, ಬ್ರಾಹ್ಮಣರಿಗೆಲ್ಲರಿಗೂ ಒಂದೊಂದು ಸೀಯಾಳ, ದಕ್ಷಿಣಾದಿ ಗಳನ್ನಿಟ್ಟು, ಹನ್ನೊಂದನೇ ಹನ್ನೆರಡನೇ ದಿನಗಳಲ್ಲಿ ನಡಿಯತಕ್ಕ ಉತ್ತರ ಕ್ರಿಯಾದಿಗಳಿಗೆ ಆಮಂತ್ರಣ ಪೂರ್ವಕ, ಅಶೌಚ ನಿವೃತ್ಯನಂತರ ಮಂತ್ರಾಕ್ಷತೆ ಕೊಡಿಸಬೇಕಾಗಿ ಅವರಲ್ಲಿ ಪ್ರಾರ್ಥಿಸಬೇಕು. ]

**ಹೀಗೆ ದಹನ ವಿಧಿಯು.**



# ಪ್ರಥಮ ದಿನದಲ್ಲಿ ಮಾಡಬೇಕಾದ ಕ್ರಮವು

ಕರ್ತೃವು ಮಧ್ಯಾಹ್ನಸಮಯದಲ್ಲಿ ನಿತ್ಯವಿಧಿಗೆ ಬೇಕಾದ ಸಾಮಾನು ಗಳನ್ನು ತೆಗೆದುಕೊಂಡು ಹೋಗಿ ಮಹಾನದಿಯಲ್ಲಿರುವ ದೊಡ್ಡ ಮಡುವಿನಲ್ಲಿ ಸ್ನಾನಮಾಡಿ ಒದ್ದೆಮಾಡಿದ ಎರಡು ಹೊಸಬಟ್ಟೆಗಳನ್ನುಟ್ಟು (ಉಪ) ಆಚಮನ ಮಾಡಿ ತೂಷ್ಣಿಯಲ್ಲಿ ಪ್ರಾಣಾಯಾಮವನ್ನೂ ಮಾಡಿ, —

ಸ್ವಸ್ತಿ ಶ್ರೀಮದ್ಭಗವತೋ ... ... ಪುರುಷಾರ್ಥಸಿಧ್ಯರ್ಥಂ (ಉತ್ತರೀ ಯವನ್ನು ಹಾಕಿಕೊಂಡು ದಕ್ಷಿಣಾಭಿಮುಖನಾಗಿ ) ( ಪ್ರಾಚೀ ) ........... ಗೋತ್ರಸ್ಯ ... ... ಪ್ರೇತಸ್ಯ ಪ್ರೇತತ್ವನಿವೃತ್ತ್ಯಾ ಉತ್ತಮಲೋಕಪ್ರಾಪ್ತ್ಯರ್ಥಂ ಪ್ರಥಮೇಽಹನಿ ದಾಹಜನಿತತಾಪೋಪಶಮನಾರ್ಥಂ ಮೃತ್ತಿಕಾ ಸ್ನಾನಾದಿ ಕರಿಷ್ಯೇ ॥ ಎಂದು ಸಂಕಲ್ಪಿಸಿ-

ಓಂ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ
ವಿಶ್ವಾಯ ಸೂರ್ಯಂ ॥

ಎಂದು ಶುದ್ಧವಾದ ಮೃತ್ತಿಕೆಯನ್ನು ತೆಗೆದು-

ಓಂ ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ
ಮರ್ತ್ಯಂ ಚ । ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ
ಭುವನಾನಿ ಪಶ್ಯನ್ ॥

ಎಂದು ಸೂರ್ಯನಿಗೆ ತೋರಿಸಿ—

ಓಂ ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್ ।
ಸ ಭೂಮಿಂವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಂ ॥

ಎಂದು ತಲೆಗೆ ಲೇಪಿಸಿ—

ಓಂ ಅಂಗಾದಂಗಾಲ್ಲೋಮ್ನೋ ಲೋಮ್ನೋ ಜಾತಂ ಪರ್ವಣಿ ಪರ್ವಣಿ । ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿವೃಹಾಮಿ ತೇ ॥

ಎಂದು ಶರೀರಕ್ಕೆಲ್ಲಾ ಲೇಪಿಸಿ ಸ್ನಾನಮಾಡಿ ಆಚಮನವನ್ನೂ ಮಾಡಿ ಪುನಃ ಇದೇರೀತಿಯಲ್ಲಿ ಮೃತ್ತಿಕಾಸ್ನಾನವನ್ನು ಎರಡುಸಲ ಮಾಡಬೇಕು.

ಅನಂತರ (ಉಪ) ಆಚಮನಮಾಡಿ, ಪೂರ್ವೋಚ್ಚರಿತಸಂಕಲ್ಪ ಇವ ____ ಸಿಧ್ಯರ್ಥಂ (ಪ್ರಾಚೀ) ____ ಗೋತ್ರಸ್ಯ ____ ಪ್ರೇತಸ್ಯ ದಾಹಜನಿತತೃಷೋಪಶಮನಾರ್ಥಂ ತಿಲತೋಯಾಂಜಲಿದಾನಂ ಕರಿಷ್ಯಾಮಿ ॥ ಎಂದು ಸಂಕಲ್ಪಿಸಿ, ವಾಸೋದಕತಿಲೋದಕಗಳನ್ನು ಕೊಡಲು ತ್ರಿ[1]ಕೋಣಾಕಾರದ ಒಂದು ಕುಂಡವನ್ನು ಮಾಡಿ ಅದರ ಮಧ್ಯದಲ್ಲಿ ದರ್ಭೆಯ ಮೇಲೆ, ಮೊದಲು ಜಾಗ್ರತೆಯಾಗಿಟ್ಟ ಆ ಪ್ರೇತಶಿಲೆಯನ್ನು ಸ್ಥಾಪಿಸಿ [ಅದರ ಸನ್ನಿಧಿಯಲ್ಲಿ ಬಲಾ (ಕಡೀರು) ಎಂಬ ಔಷಧಿಯ ಗಿಡವನ್ನು ನೆಡುವುದು ಈ ದೇಶದಲ್ಲಿ ಕೆಲವರ ಪದ್ಧತಿಯಾಗಿದೆ ] "ಆಯಾಹಿ ಪ್ರೇತ" ಎಂದಾವಾಹಿಸಿ, ಆ ಶಿಲೆಯ ಮೇಲೆ ..........ಗೋತ್ರ... ............ಪ್ರೇತ ದಾಹಜನಿತತೃಷೋಪಶಮನಾರ್ಥಂ ಏತದ್ವಾಸೋದಕಮುಪತಿಷ್ಠತಾಂ ॥ ಎಂದು ದಕ್ಷಿಣಾಭಿಮುಖನಾಗಿ ಎಡಮೊಣಕಾಲೂರಿ ಮುಸ್ಕುಡಿ ಮಾಡಿದ ಉತ್ತರೀಯದ ನೀರನ್ನೊಂದುಸಲ ಹಿಂಡಬೇಕು. ಪುನಃ ಸ್ನಾನಮಾಡಿ ಪುನರಪಿ ವಾಸೋದಕ. ಪುನಃ ಸ್ನಾನ. ಪುನರ್ವಾಸೋದಕ. ಹೀಗೆ ಮೂರುಸಲ ವಾಸೋದಕ ಕೊಟ್ಟು ಪುನಃ ಸ್ನಾನಮಾಡಿ ತಿಲಾಂಜಲಿದಾನಕ್ಕೆ ಏಳು, ಯಾ ಎಂಟು ಸಂಖ್ಯೆಯಲ್ಲಿ ಎಳ್ಳುಗಳನ್ನು ತೆಗೆದು ದರ್ಭೆ ಸೇರಿಸಿ ದಕ್ಷಿಣಾಭಿಮುಖನಾಗಿ ನಿಂತು, ... ...ಗೋತ್ರ..... ... ಪ್ರೇತ ದಾಹಜನಿತತಾಪೋಪಶಮನಾರ್ಥಂ ಏಷ ತಿಲತೋಯಾಂಜಲಿಸ್ತ್ವಮುಪತಿಷ್ಠತಾಂ । ಎಂದು ನೀರೆರೆದು ತಿಲಾಂಜಲಿಯನ್ನು ಕೊಡಬೇಕು. ಹೀಗೆ ಹತ್ತನೆದಿನಪರ್ಯಂತ ಪ್ರತಿದಿನ ಮೂರು ಮೂರು ಸಂಖ್ಯೆಯಲ್ಲಿ ವಾಸೋದಕವನ್ನು ಹ[2]ತ್ತು ಹತ್ತು ಸಂಖ್ಯೆಯಲ್ಲಿ ತಿಲತೋಯಾಂಜಲಿಯನ್ನು ಕೂಡ ಕೊಡುತ್ತಾ

1 ▷

2 ಈ ತಿಲಾಂಜಲಿದಾನದ ಸಂಖ್ಯೆಯು ಶಾಸ್ತ್ರದಲ್ಲಿ ಅನೇಕ ವಿಧವಾಗಿ ಹೇಳಲ್ಪಟ್ಟರೂ ಈ ದೇಶದ ಶಿಷ್ಟಾಚಾರವನ್ನನುಸರಿಸಿ ಈ ಸಂಖ್ಯೆಯನ್ನು ನಿರೂಪಿಸಿದ್ದಾಗಿದೆ.

ಬರಬೇಕು [ವಾಡಿಕೆಯಲ್ಲಿ ಮಾತ್ರ ಪ್ರತಿದಿನವೂ ಕೊನೆಗೆ ಮೇಲಿನಂತೆ ಗೋತ್ರನಾಮಗಳೊಂದಿಗೆ "ಕೇಶೋದಕಮುಪತಿಷ್ಠತಾಂ" ಎಂದು ತಲೆಕೂದಲಿನ ನೀರನ್ನೆರೆಯುವ ಕ್ರಮವಿದೆ. ]

ಪುನಃ ಸ್ನಾನಮಾಡಿ ಮನೆಗೆಬಂದು ಮೃತಿಸ್ಥಳದಲ್ಲಿ ಹತ್ತು ದಿನ ಪರ್ಯಂತ ನೊಂದದಹಾಗೆ ದಕ್ಷಿಣಾಭಿಮುಖವಾದ ದೀಪವನ್ನು ಎಳ್ಳೆಣ್ಣೆರೆದು ಹಚ್ಚಿ, ಅದರ ಸನ್ನಿಧಿಯಲ್ಲಿ ಹೊಸನೂಲುಗಳಿಂದ ಮಾಡಿದ ಎರಡು ಶಿಕ್ಯ (ಬಳ) ಗಳನ್ನು ಕಟ್ಟಿ ಎರಡು ಹೊಸಮಣ್ಣಿನ ಪಾತ್ರಗಳನ್ನವುಗಳಲ್ಲಿಟ್ಟು, ... ...ಗೋತ್ರ........ಪ್ರೇತ ಅತ್ರ ಸ್ನಾಹಿ । ಎಂದು ಒಂದು ಪಾತ್ರದಲ್ಲಿ ನೀರನ್ನೆರೆದು,........ಗೋತ್ರ ....... ಪ್ರೇತ ಇದಂ ಪಿಬ। ಎಂದು ಮತ್ತೊಂದುಪಾತ್ರದಲ್ಲಿ ಹಾಲನ್ನೆರೆದಿಡಬೇಕು. [ಆಚಾರದಲ್ಲಿ, ಆ ದೀಪದ ಹತ್ತಿರ ಒಂದು ಬಟ್ಟಲಿಟ್ಟು ಅದರ ಮೇಲೆ ಹೊಸ ನೂಲಿನಿಂದ ಬೆಳ್ಳಿಯುಂಗುರವೊಂದನ್ನು ಅರಸಿನಗಡ್ಡೆಯೊಂದಿಗೆ ಕಟ್ಟಿತೂಗಾಡಿಸಿ ಆ ಬಟ್ಟಲಿಗೆ ಬೆಳಗೂ ಸಾಯಂಕಾಲವೂ ಮಿಂದು ನೀರು ಹಾಲುಗಳನ್ನೆರೆದು ವಾಷೋದಕ ಕೇಶೋದಕಗಳನ್ನೆರೆಯುವುದು ಕಂಡು ಬರುವುದು. ಅದಕ್ಕೆ ನೀರ್ನೆರಳೆಂದು ಹೇಳುತ್ತಾರೆ. ಈ ಆಚಾರವು ವಿಧಿಬಾಹಿರವಾಗಿರುವುದರಿಂದ ಅನಾಚರಣೀಯ. ]

ಪುನಃ (ಉತ್ತರ) ಕುಳಿತು ಆಚಮನಮಾಡಿ ದಕ್ಷಿಣಾಭಿಮುಖನಾಗಿ, ಪೂರ್ವೋಚ್ಚರಿತ ... ...ಸಿದ್ಧ್ಯರ್ಥಂ (ಪ್ರಾಚೀ) ....... ...ಗೋತ್ರಸ್ಯ .. ....... ಪ್ರೇತಸ್ಯ ಆದ್ಯೇಽಹನಿ ಶಿರೋಽವಯವನಿಷ್ಪತ್ತ್ಯರ್ಥಂ ಏಕೋದ್ದಿಷ್ಟವಿಧಿನಾ ನಿತ್ಯ ಬಲಿಪಿಂಡದಾನಂ ಕರಿಷ್ಯಾಮಿ ॥ ಎಂದು ಸಂಕಲ್ಪಿಸಿ ತಾಮ್ರ ಮೊದಲಾದ ಹೊಸ ಪಾತ್ರವೊಂದನ್ನು ತೊಳೆದು ಅದರಲ್ಲಿ ಪಿಂಡಕ್ಕೆ ಒಂದುಸೇರೆ ಅಕ್ಕಿಯನ್ನೆರಡುಸಲ ತೊಳೆದು ಲೌಕಿಕಾಗ್ನಿಯಲ್ಲಿ ತಾನೇ ಬೇಯಿಸಿ ತುಪ್ಪದಿಂದ ಅಭಿಘಾರ ಮಾಡಿ ಕೆಳಗಿಳಿಸಿ ಮತ್ತೂ ಅಭಿಘಾರ ಮಾಡಿ ತಂದಿಟ್ಟುಕೊಳ್ಳಬೇಕು. ಆ ಮೇಲೆ ಮುಂಭಾಗದಲ್ಲಿ ಗೋಮಯದಿಂದ ಸ್ಥಳವನ್ನು ಶುದ್ಧಮಾಡಿ ಜೇಡಿ ಮಣ್ಣಿನಿಂದ ದಕ್ಷಿಣಾಭಿಮುಖವಾದ ತ್ರಿಕೋಣಮಂಡಲವನ್ನು ಮಾಡಿ "ಓಂ ಭೂರ್ಭುವಸ್ಸ್ವಃ"

---

ಪೂ.

ತ್ರಿಕೋಣಮಂಡಲ — ಉ. ▷ ದ.

ಪ.

ಎಂದು ನೀರಿನಿಂದ ಪ್ರೋಕ್ಷಿಸಿ " ಓಂ ಅಪಹತಾ ಅಸುರಾ ರಕ್ಷಾಂಸಿ "

ಎಂದು ಜೇಡಿಮಣ್ಣಿನ ಹುಡಿಯನ್ನು ಮಂಡಲದೊಳಗೆ ಚೆಲ್ಲಿ ಇದೇ ಮಂತ್ರದಿಂದ ಎಳ್ಳನ್ನೂ ಆ ಮಂಡಲದೊಳಗೆ ಚೆಲ್ಲಬೇಕು.

ಆ ಮೇಲೆ ಪಿತುಃ ನಿತ್ಯಬಲಿಶ್ರಾದ್ಧೇ ಮೃತೇಽಹನಿ ........ಗೋತ್ರ ........ ... ಪ್ರೇತೇದಂ ತೇ ಪಿಂಡಾದೌ ಬರ್ಹಿರುಪತಿಷ್ಠತಾಂ || ಎಂದು ದಕ್ಷಿಣಾಗ್ರವಾಗಿ ದರ್ಭೆಯಿಟ್ಟು ಗಂಧ, ಎಳ್ಳು, ತುಳಸಿಗಳಿಂದಲಂಕರಿಸಿ ಪಿಂಡಸ್ಥಾನವನ್ನು ಭಾವಿಸಿ,

.... ... ...ಗೋತ್ರ ..........ಪ್ರೇತೇದಂ ತೇ ಬರ್ಹಿಷ್ಯಾವಾಹನಮುಪತಿಷ್ಠತಾಂ || ಎಂದಾವಾಹಿಸಿ, ........ಗೋತ್ರ .... ...ಪ್ರೇತೇದಂ ತೇ ಬರ್ಹಿರುಪರಿ ತಿಲೋದಕ ಮುಪತಿಷ್ಠತಾಂ || ಎಂದು ತಿಲೋದಕ ಕೊಟ್ಟು, ........ ಗೋತ್ರಾಯ .... ...ಪ್ರೇತಾಯ ನಮಃ || ಎಂದು ಪುಷ್ಪದಿಂದಾರಾಧಿಸಿ, ........ ...ಗೋತ್ರ ... ...ಪ್ರೇತೇದಂ ತೇ ಪಿಂಡಾದೌಬರ್ಹಿಷಿ ತಿಲೋದಕಮುಪತಿಷ್ಠತಾಂ || ಎಂದು ತಿಲೋದಕಕೊಟ್ಟು ಬೆಲ್ಲ, ಹಣ್ಣು, ಎಳ್ಳು, ತುಪ್ಪ, ಜೇನು ಸಕ್ಕರೆ, ಹಾಲು. ಇವುಗಳ ಮಿಶ್ರಣದಿಂದ ದೊಡ್ಡದಾದ ಪಿಂಡವನ್ನು ಮಾಡಿ ಪಿತುಃ ನಿತ್ಯಬಲಿ ಶ್ರಾದ್ಧೇ ... ...ಗೋತ್ರ ........ಪ್ರೇತೇದಂ ತೇ ಅದ್ಯೇಽಹನಿ ಶಿರೋಽವಯುವ ನಿಷ್ಪತ್ತ್ಯರ್ಥಂ ಏಷ ನಿತ್ಯಬಲಿಪಿಂಡಸ್ತ್ವೋಪತಿಷ್ಠತಾಂ ||

ಎಂದು ಪಿಂಡಪ್ರದಾನವನ್ನು ಮಾಡಿ, ಪಿಂಡೋಪರಿ ತಿಲೋದಕ ಕೊಟ್ಟು ( ಉಪ ) ಪಿಂಡವನ್ನು ಹಿಡಿದು ಅಷ್ಟಾಕ್ಷರಿ ಮತ್ತು ಪಂಚಾಕ್ಷರಿಗಳನ್ನು ಜಪಿಸಿ (ಪ್ರಾಚೀ) ... ...ಗೋತ್ರ ........ಪ್ರೇತಾಭ್ಯಙ್ಕ್ಷ್ವ || ಎಂದು ಎಳ್ಳೆಣ್ಣೆಯನ್ನು ಪಿಂಡಕ್ಕೆ ಮುಟ್ಟಿಸಿ, ಪುನಸ್ತಿಲೋದಕ ಕೊಟ್ಟು ........ ಗೋತ್ರ ... ...ಪ್ರೇತಾಙ್ಕ್ಷ್ವ || ಎಂದು ಅಂಜನವನ್ನು ಮುಟ್ಟಿಸಿ ಗೋತ್ರನಾಮಗಳೊಂದಿಗೆ ಪುನಸ್ತಿಲೋದಕ ಕೊಟ್ಟು ........ಗೋತ್ರ ........ಪ್ರೇತೇದಂ ತೇ ವಾಸ ಉಪತಿಷ್ಠತಾಂ || ಎಂದು ಉತ್ತರೀಯದ ಕರೆಯನ್ನು ಹರಿದಿಟ್ಟು ಪುನಃ ಮೊದಲಿನಂತೆ ತಿಲೋದಕ ಕೊಡಬೇಕು. ........ಗೋತ್ರ ........ಪ್ರೇತಾಯಂತೇ ಗಂಧ ಉಪತಿಷ್ಠತಾಂ || ತುಳಸೀದಳಮುಪತಿಷ್ಠತಾಂ || [1] ಭೃಂಗರಾಜಪತ್ರಮುಪತಿಷ್ಠತಾಂ || [2] ದೂರ್ವಾದಳಮುಪತಿಷ್ಠತಾಂ || ಧೂಪ ಉಪ

1 ಗರಗ (ಕಯ್ಯಣ್ಣಿ) ಸಸಿಯ ಎಲೆ. 2 ಗರುಕೆ ಹುಲ್ಲಿನ ಎಲೆ.

ತಿಷ್ಠತಾಂ || ದೀಪ ಉಪತಿಷ್ಠತಾಂ || ಎಂದು ಇವುಗಳೆಲ್ಲವನ್ನೂ ಪಿಂಡಕ್ಕೆ ಅರ್ಪಿಸಿ ವಾಯಸ ಬಲಿಗೆ ಬೇಕಾದುದನ್ನು ಎಲೆಗೆ ಬಡಿಸಿ, ಹವಿಸ್ಸಿನ ಪಾತ್ರವನ್ನು ಚೆನ್ನಾಗಿ ತೊಳೆದು ಆ ನೀರನ್ನು ಪಿಂಡದ ಸುತ್ತಲೂ ಅಪ್ರದಕ್ಷಿಣವಾಗಿ ಮೂರು ಸಲ ಪರಿಷೇಚಿಸುತ್ತಾ ........ಗೋತ್ರ ........ಪ್ರೇತೇದಂ ತೇ ಪಾತ್ರಸಂಕ್ಷಾಲನೋದಕ ಮುಪತಿಷ್ಠತಾಂ || ಎಂದು ಹೇಳಿ, ಸಮಸ್ತೋಪಚಾರಾರ್ಥೇ ತಿಲೋದಕ ಮುಪತಿಷ್ಠತಾಂ || ಎಂದು ತಿಲೋದಕ ಕೊಟ್ಟು ಕೈಯಲ್ಲಿ ಪುಷ್ಪಗಳನ್ನು ತೆಗೆದು, ಅನಾದಿ ನಿಧನೋ ........ ಭವ || ಇದಂ ಪಿಂಡದಾನಂ ಸತಿಲೋದಕಂ ಪ್ರೇತಾಪ್ಯಾಯನಮಸ್ತು || ಎಂದು ಹೇಳಿ ಪ್ರೇತಾರ್ಪಣೆಮಾಡಿ " ಅಭಿರಮ್ಯತಾಂ ಪ್ರೇತ " ಎಂದು ಹೇಳಿ ಪಿಂಡೋದ್ವಾಸನೆಮಾಡಿ ವಾಯಸ ಬಲಿಸ್ಥಾನಕ್ಕೆ ......ಗೋತ್ರ ..... ..ಪ್ರೇತೇದಂ ತೇ ವಾಯಸಬಲಿಸ್ಥಾನೇ ತಿಲೋದಕಮುಪತಿಷ್ಠತಾಂ || ಎಂದು ತಿಲೋದಕಕೊಟ್ಟು ಯಮನ ವರ[2] ವನ್ನು ಗ್ರಹಿಸುತ್ತಾ ವಾಯಸಬಲಿಯನ್ನು ಹೊರಗಿಟ್ಟುಬಂದು ಪಿಂಡವನ್ನು ತೆಗೆದು ನದಿಗೆ ಹಾಕಿ ಸ್ನಾನವನ್ನು ಮಾಡಬೇಕು.

( ಶಾಸ್ತ್ರಗಳಲ್ಲಿ, ಈ ನಿತ್ಯಪಿಂಡವನ್ನು ಪ್ರತಿದಿನವೂ ಮಧ್ಯಾಹ್ನದಲ್ಲಿ ಒಂದಾವರ್ತಿಯೇ ಮಾಡಲು ವಿಧಿಸಿ. ವಾಯಸಬಲಿಯನ್ನು ಬೆಳಿಗ್ಗೆ ಮತ್ತು ಸಾಯಂಕಾಲ. ಹೀಗೆ ಎರಡುಹೊತ್ತೂ ಕೊಡಲು ವಿಧಿಸಿರುವುದರಿಂದ ಶಿಷ್ಟರು ಸಾಯಂಕಾಲದ ಬಲಿಯ ಅಂಗವಾಗಿ ಈ ನಿತ್ಯಪಿಂಡವನ್ನೂ ಆವರ್ತಿಸಿರುತ್ತಾರೆ)

ಹೀಗೆ ನಿತ್ಯಬಲಿಶ್ರಾದ್ಧದ ವಿಧಿಯು.

---

1 ಯಮನವರವೆಂದರೆ; ಯಮನು ವಾಯಸಗಳಿಗೆ ಕೊಟ್ಟವರ. ಅದು ಉತ್ತರ ರಾಮಾಯಣದಲ್ಲಿಯೂ ಭಾರತದಲ್ಲಿಯೂ ಪ್ರಸಿದ್ಧವಾಗಿದೆ. ಹೇಗೆಂದರೆ; ಯೋಚಮದ್ವಿಷಯಾ ನಾಮ ಮಾನವಾಃ ಕ್ಷುಧಿತಾ ಭೃಶಂ । ತ್ವಯಿಭುಕ್ತೇತು ತೃಪ್ತಾಸ್ತೇ ಭವಿಷ್ಯಂತಿ ಸಬಾಂಧವಾಃ ॥ ಅರ್ಥ— ವಾಯಸವೆ! ನನ್ನ ಊರಿನಲ್ಲಿ ನಾನು ಕೊಟ್ಟ ಕಷ್ಟದಿಂದ ಯಾವ ಮನುಷ್ಯರು ತುಂಬಾ ಹಸಿವೆಯಿಂದ ಬಳಲುತ್ತಾರೋ ಅವರು, ನೀನು ಬಲಿಯನ್ನು ತಿಂದರೆ ಪರಿವಾರ ಸಮೇತರಾಗಿ ತೃಪ್ತರಾಗುವರು, ಎಂದು.

ನಿತ್ಯಬಲಿಶ್ರಾದ್ಧದಲ್ಲಿ ಎರಡನೆಯ ದಿನ ಬದಲಾಯಿಸತಕ್ಕ ನಿಯಮಗಳು :—

## — ಮೃತ್ತಿಕಾಸ್ನಾನ ತಿಲಾಂಜಲಿಗಳ ಸಂಕಲ್ಪ —

" ದ್ವಿತೀಯೇಽಹನಿ " ದಾಹಜನಿತ ತಾಪೋಪಶಮನಾರ್ಥಂ ॥ ಎಂದು.

## ಪಿಂಡಪ್ರದಾನ ಸಂಕಲ್ಪ.

.... .... ..ಗೋತ್ರಸ್ಯ ... .... ..ಪ್ರೇತಸ್ಯ " ದ್ವಿತೀಯೇಽಹನಿ ಚಕ್ಷುಶ್ಶ್ರೋತ್ರ ನಾಸಾವಯವ ನಿಷ್ಪತ್ಯರ್ಥಂ " ನಿತ್ಯಬಲಿಪಿಂಡದಾನಂ ಕರಿಷ್ಯಾಮಿ ॥ ಎಂದು- ಹೀಗೆ ಪಿಂಡದಾನಕ್ಕೂ ಬದಲಾಯಿಸಿಕೊಳ್ಳಬೇಕು. ಹೇಗೆಂದರೆ ... ...ಗೋತ್ರ . ... ..ಪ್ರೇತ ದ್ವಿತೀಯೇಽಹನಿ ಚಕ್ಷುಶ್ಶ್ರೋತ್ರನಾಸಾವಯವ ನಿಷ್ಪತ್ಯರ್ಥಮಯಂ ತೇ ಪಿಂಡ ಉಪತಿಷ್ಠತಾಂ ॥

ಹೀಗೆಯೇ ಮೂರನೇ, ನಾಲ್ಕನೇ ಮೊದಲಾದ ದಿನಗಳಲ್ಲಿ ಆಯಾ ದಿನಾನುಸಾರ ತೃತೀಯೇಽಹನಿ, ಚತುರ್ಥೇಽಹನಿ, ಪಂಚಮೇಽಹನಿ, ಷಷ್ಠೇಽಹನಿ, ಸಪ್ತಮೇಽಹನಿ ಎಂದು ಮೊದಲಾಗಿ ಸೇರಿಸಿಕೊಂಡು ಸಂಕಲ್ಪಪೂರ್ವಕ ಮೃತ್ತಿಕಾಸ್ನಾನವನ್ನು ಮಾಡಿ ತಿಲಾಂಜಲಿಯನ್ನು ಕೊಡಬೇಕು.

## ಮೂರನೇದಿನ ಪಿಂಡದಾನ ಸಂಕಲ್ಪ.

" ತೃತೀಯೇಽಹನಿ ಭುಜವಕ್ಷೋಗ್ರೀವಾಮುಖಾವಯವ ನಿಷ್ಪತ್ಯರ್ಥಂ " ಎಂದು ಸಂಕಲ್ಪಿಸಿ ಪಿಂಡದಾನಕ್ಕೂ ಹೀಗೆ ಸೇರಿಸಿಕೊಳ್ಳಬೇಕು.

## ನಾಲ್ಕನೇ ದಿನ.

ಚತುರ್ಥೇಽಹನಿ ಪಾರ್ಷ್ಣಿಕುಕ್ಷಿಕಟಿನಾಭಿ ಗುದಲಿಂಗಾವಯವ ನಿಷ್ಪತ್ಯರ್ಥಂ ॥ ಎಂದು.

## ಐದನೇ ದಿನ.

ಪಂಚಮೇಽಹನಿ ಊರು ಜಾನು ಜಂಘಾವಯವನಿಷ್ಪತ್ಯರ್ಥಂ ॥

## ಆರನೇ ದಿನ.

ಷಷ್ಠೇಽಹನಿ ಗುಲ್ಫಪಾದಾಂಗುಲಿ ಚರ್ಮಾದ್ಯವಯವ ನಿಷ್ಪತ್ಯರ್ಥಂ ॥

## ಏಳನೇ ದಿನ.

ಸಪ್ತಮೇಽಹನಿ ಅಸ್ಥಿಮಜ್ಜಾ ಶಿರಾವಯವ ನಿಷ್ಪತ್ತ್ಯರ್ಥಂ ||

## ಎಂಟನೇ ದಿನ.

ಅಷ್ಟಮೇಽಹನಿ ನಖರೋಮಾದ್ಯವಯವ ನಿಷ್ಪತ್ತ್ಯರ್ಥಂ ||

## ಒಂಬತ್ತನೇ ದಿನ.

ನವಮೇಽಹನಿ ಮರ್ಮವೀರ್ಯಾದಿ ಸರ್ವಾವಯವ ನಿಷ್ಪತ್ತ್ಯರ್ಥಂ ||

## ಹತ್ತನೇ ದಿನ.

ದಶಮೇಽಹನಿ ಕ್ಷುತ್ಪಿಪಾಸಾ ನಿವೃತ್ತ್ಯರ್ಥಂ || ಎಂದು ವ್ಯತ್ಯಾಸಗಳನ್ನು ಮಾಡಿಕೊಳ್ಳಬೇಕು.

## ನಗ್ನಪ್ರಚ್ಛಾದನಶ್ರಾದ್ಧವು.

( ಉಪ ) ಆಚಮನ, ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಗಳನ್ನುಚ್ಚರಿಸಿ, (ಪ್ರಾಚೀ) ........ಗೋತ್ರಸ್ಯ ........ಪ್ರೇತಸ್ಯ ಪ್ರೇತತ್ವನಿವೃತ್ತಿಕಾಮಃ ಪ್ರಥಮದಿನವಿಹಿತಂ ನಗ್ನಪ್ರಚ್ಛಾದನಶ್ರಾದ್ಧಂ ಕರಿಷ್ಯಾಮಿ || ಎಂದು ಸಂಕಲ್ಪಿಸಿ ಉತ್ತರಾಭಿಮುಖವಾಗಿ ಬ್ರಾಹ್ಮಣನ ಬದಲಿಗೆ ಒಂದು ಕೂರ್ಚವನ್ನಿರಿಸಿ ಗೋತ್ರನಾಮಗಳನ್ನು ಹೇಳಿ, ನಗ್ನ ಪ್ರಚ್ಛಾದನಶ್ರಾದ್ಧೇ ಅಯಂ ತೇ ಕ್ಷಣ ಉಪತಿಷ್ಠತಾಂ || ಎಂದು ಒಂದು ದರ್ಭೆಯನ್ನು ಕೊಟ್ಟು ........ಗೋತ್ರಸ್ಯ ........ಪ್ರೇತಸ್ಯ ನಗ್ನಪ್ರಚ್ಛಾದನ ಶ್ರಾದ್ಧೇ ಇದಂ ತೇ ಪಾದ್ಯಮುಪತಿಷ್ಠತಾಂ || ಎಂದು ಪಾದ್ಯವನ್ನು ಕೊಟ್ಟು, ........ಗೋತ್ರಸ್ಯ ........ಪ್ರೇತಸ್ಯ ನಗ್ನಪ್ರಚ್ಛಾದನಶ್ರಾದ್ಧೇ ಆಸನಮುಪತಿಷ್ಠತಾಂ || ಎಂದು ಕೂರ್ಚಬ್ರಾಹ್ಮಣನ ಎಡಭಾಗದಲ್ಲಿ ಎಳ್ಳುಸಹಿತ ಒಂದು ದರ್ಭೆಯನ್ನಿಟ್ಟು, ತನ್ನ ಎದುರಿನಲ್ಲಿ ದಕ್ಷಿಣಾಗ್ರವಾಗಿ ಒಂದು ದರ್ಭೆಯನ್ನೂ, ಅದರಲ್ಲಿ ಒಂದು ಪಾತ್ರವನ್ನೂ ಇಟ್ಟು ಅದರೊಳಗೆ ಒಂದೆಳೆಯ ಕೂರ್ಚವನ್ನು ಹಾಕಿ ನೀರುತುಂಬಿಸಿ–

ತಿಲೋಽಸಿ ಪ್ರೇತದೇವತ್ಯೋ ಗೋಸವೇ ದೇವನಿರ್ಮಿತಃ ।
ಪ್ರತ್ನವದ್ಭಿಃ ಪ್ರತ್ತಃ ಪ್ರೇತೇಮಾನ್ಲೋಕಾನ್ ಪ್ರೀಣಯಾಹಿ ನಃ ||

ಎಂದು ಹೇಳಿ, ಯಾ ತೂಷ್ಣೀಯಲ್ಲಿ ಎಳ್ಳನ್ನು ಹಾಕಿ, ........ಗೋತ್ರ ........ ಪ್ರೇತ ನಗ್ನಪ್ರಚ್ಛಾದನಶ್ರಾದ್ಧೇ ಇದಮರ್ಘ್ಯಂ ತವೋಪತಿಷ್ಠತಾಂ || ಎಂದು ಅರ್ಘ್ಯಕೊಟ್ಟು,

........ಗೋತ್ರ ....ಪ್ರೇತ ನಗ್ನಪ್ರಚ್ಛಾದನಶ್ರಾದ್ಧೇ ಇದಮಾಚ್ಛಾದನಂ ತವೋಪತಿಷ್ಠತಾಂ || ಎಂದು ಒಂದು ದರ್ಭೆಯನ್ನು ಕೊಡಬೇಕು ಅನಂತರ ತುಪ್ಪಮಿಶ್ರವಾದ ಅನ್ನವನ್ನು ಕೈಯಲ್ಲಿ ತೆಗೆದು,

........ಗೋತ್ರಾಯ ......ಪ್ರೇತಾಯ ಸ್ವಾಹಾ ||

ಎಂದು ಕೂರ್ಚಬ್ರಾಹ್ಮಣನ ಬಲಕೈಯಲ್ಲಿ ಹೋಮಿಸಿ,

.......ಗೋತ್ರಾಯ ......ಪ್ರೇತಾಯ ದಾಸ್ಯಮಾನಮಾಮಂ ಯಥಾಶಕ್ತಿ ಸೋಪಸ್ಕರಂ ಸಘೃತಂ ಸೋದಕುಂಭಂ ಸವಸ್ತ್ರಂ ಯಥಾಶಕ್ತಿ ಕಾಂಸ್ಯಪಾತ್ರಸುವರ್ಣ ರಜತಲೋಹ ತೈಲದಕ್ಷಿಣೋಪೇತಂ ಸೋಪಾನತ್ಕಂ ಸೋದಪಾತ್ರ ಮುಪತಿಷ್ಠತಾಂ ||

ಎಂದು ಈ ವಾಕ್ಯದಲ್ಲಿ ಹೇಳಿದ ಸಾಮಾನುಗಳೊಂದಿಗೆ ಅಕ್ಕಿಯನ್ನು ಕೊಡಬೇಕು.

ಅನಂತರ ಪಿಂಡದಾನಕ್ಕೆ ಒಂದು ದರ್ಭೆಯನ್ನು ನೆಲದಮೇಲಿಟ್ಟು ಪ್ರೋಕ್ಷಿಸಿ, ಶುಂಧಂತಾಂ ಪ್ರೇತಾಃ || ಎಂದು ಅದರ ಮೇಲೆ ನೀರುಬಿಟ್ಟು,

.. ..ಗೋತ್ರಾಯ ——ಪ್ರೇತಾಯ ನಗ್ನಪ್ರಚ್ಛಾದನಶ್ರಾದ್ಧೇ ಅಯಂ ಸಕ್ತುಪಿಂಡ ಉಪತಿಷ್ಠತಾಂ || ಎಂದು ಪಿಂಡಪ್ರದಾನವನ್ನು ಮಾಡಿ.

ಪಿಂಡೋಪರಿ ತಿಲೋದಕ ಮುಪತಿಷ್ಠತಾಂ ||

ಎಂದು ತಿಲೋದಕಕೊಟ್ಟು ( ಉಪ ) ಪಿಂಡಹಿಡಿದು ಅಷ್ಟಾಕ್ಷರ, ಪಂಚಾಕ್ಷರಮಂತ್ರಗಳನ್ನು ಜಪಿಸಿ ನಿತ್ಯಬಲಿಶ್ರಾದ್ಧದಂತೆ ( ಪ್ರಾಚೀ ) ಗೋತ್ರನಾಮಗಳನ್ನು ಉಚ್ಚರಿಸುತ್ತಾ ಅಭ್ಯಂಜನ, ಅಂಜನ, ಉತ್ತರೀಯದನೂಲು, ತುಳಸೀದಳ, ಭೃಂಗರಾಜಪತ್ರಗಳನ್ನು ಪಿಂಡಕ್ಕೆ ಅರ್ಪಿಸಿ ಉಪಸ್ಥಾನಮಾಡಬೇಕು.

ಅನಂತರ ——ಗೋತ್ರಾಯ ——ಪ್ರೇತಾಯ ನಗ್ನಪ್ರಚ್ಛಾದನ ಶ್ರಾದ್ಧೇ ದಕ್ಷಿಣೋಪತಿಷ್ಠತಾಂ ॥ ಎಂದು ದಕ್ಷಿಣೆಕೊಟ್ಟು, ಅನಾದಿ ನಿಧನೋ ——ಭವ ॥ ಎಂದು ಪ್ರಾರ್ಥಿಸಿ "ಅಭಿರಮ್ಯತಾಂ" ಎಂದು ಹೇಳಿ "ಅಭಿರತಾಸ್ಮಃ" ಎಂಬ ಉತ್ತರವನ್ನು ಆಚಾರ್ಯನಿಂದ ಪಡೆದು, ವಾಯಸ ಬಲಿ ಮೊದಲಾದ ಕೆಲಸಗಳನ್ನು ನಿತ್ಯಬಲಿಶ್ರಾದ್ಧದ ರೀತಿಯಲ್ಲಿಮಾಡಿ ಪಿಂಡೋದ್ವಾಸನನನ್ನು ಮಾಡಿ ಮಿಂದು ಪಾಥೇಯಾಶ್ರಾದ್ಧವನ್ನು ಮಾಡಬೇಕು.

## ಪಾಥೇಯಾಶ್ರಾದ್ಧ.

(ಉಪ) ಆಚಮನ, ಪ್ರಾಣಾಯಾಮಗಳನ್ನು ಮಾಡಿ,

ಪೂರ್ವೋಚ್ಚರಿತಸಂ ——ಸಿಧ್ಯರ್ಥಂ (ಪ್ರಾಚೀ) ——ಗೋತ್ರಸ್ಯ ——ಪ್ರೇತಸ್ಯ ಮನುಷ್ಯಲೋಕಾತ್ ಪ್ರೇತಲೋಕ ಗಮನಾರ್ಥಂ ಪಾಥೇಯಾಶ್ರಾದ್ಧಂ ಕರಿಷ್ಯಾಮಿ ॥

ಎಂದು ಸಂಕಲ್ಪಿಸಿ, ಒಂದು ಕೂರ್ಚವನ್ನು ಉತ್ತರಾಭಿಮುಖವಾಗಿಟ್ಟು,

... .. ...ಗೋತ್ರ ........ ...ಪ್ರೇತ ಪಾಥೇಯಶ್ರಾದ್ಧೇ ಅಯಂ ತೇ ಕ್ಷಣ ಉಪತಿಷ್ಠತಾಂ ॥

... ... ..ಗೋತ್ರ .... ... ...ಪ್ರೇತ ಪಾಥೇಯಶ್ರಾದ್ಧೇ ಇದಂತೇ ಪಾದ್ಯ ಮುಪತಿಷ್ಠತಾಂ ॥

——ಗೋತ್ರಸ್ಯ ——ಪ್ರೇತಸ್ಯ ಪಾಥೇಯಶ್ರಾದ್ಧೇ ಆಸನ ಮುಪತಿಷ್ಠತಾಂ ॥

ಇದೇ ರೀತಿಯಲ್ಲಿ, ಮೊದಲಿನಂತೆ ತಯಾರಿಸಿದ ಅರ್ಘ್ಯಪಾತ್ರದಿಂದ ಅರ್ಘ್ಯ ಮತ್ತು ಆಚ್ಛಾದನಗಳನ್ನು ಕೊಟ್ಟು,

——ಗೋತ್ರಾಯ ——ಪ್ರೇತಾಯ ಸ್ವಾಹಾ ॥ ಎಂದು ಮೊದಲಿನಂತೆ ಪಾಣಿಹೋಮವನ್ನು ಮಾಡಿ,

——ಗೋತ್ರಾಯ ——ಪ್ರೇತಾಯಾಮಂ (ತನ್ನಿಷ್ಕ್ರಯಂ ವಾ) ಯಥಾಶಕ್ತಿ ಸೋಪಸ್ಕರಂ ಸಘೃತಂ ಸೋದಕುಂಭಂ ಸವಸ್ತ್ರಂ ಯಥಾಶಕ್ತಿ ಕಾಂಸ್ಯ ಸುವರ್ಣರಜತಲೋಹ ತೈಲದಕ್ಷಿಣೋಪೇತಂ ಸೋಪಾನತ್ಕಂಸೋದಪಾತ್ರ ಮುಪತಿಷ್ಠತಾಂ ॥

ಎಂದು ಹೇಳುತ್ತಾ ಕೂರ್ಚಬ್ರಾಹ್ಮಣನಿಗೆ, ಈ ವಾಕ್ಯದಲ್ಲಿ ಹೇಳಿದ ಅಕ್ಕಿ ಮೊದಲಾದ ಸಾಮಾನುಗಳೊಂದಿಗೆ ತಿಲೋದಕವನ್ನು ಕೊಡಬೇಕು.

ಅನಂತರ ಸಕ್ತುಪಿಂಡಪ್ರದಾನಾದಿ ಕೆಲಸಗಳನ್ನು, " ನಿತ್ಯಬಲಿಶ್ರಾದ್ಧೇ " ಎಂಬುದರ ಬದಲಿಗೆ " ಪಾಥೇಯಶ್ರಾದ್ಧೇ " ಎಂದು ಹೇಳಿಕೊಂಡು ನಿತ್ಯಬಲಿ ಶ್ರಾದ್ಧದಲ್ಲಿ ಹೇಳಿದರೀತಿಯಲ್ಲೇ ಕ್ರಮಪ್ರಕಾರ ಮಾಡಿ ಕಡೆಗೆ ಸ್ನಾನ ವನ್ನು ಮಾಡಬೇಕು.

ಹೀಗೆ ಪಾಥೇಯಶ್ರಾದ್ಧವು.

## — [1] ನವ ( ವಿಷಮ ) ಶ್ರಾದ್ಧವು —

( ಉಪ ) ಆಚಮನ, ಪ್ರಾಣಾಯಾಮಗಳನ್ನು ಮಾಡಿ, ಸ್ವಸ್ತಿಶ್ರೀ ಮದ್ಭಗವತೋ ——ಸಿಧ್ಯರ್ಥಂ ( ಪ್ರಾಚೀ ) ——ಗೋತ್ರಸ್ಯ —— ಪ್ರೇತಸ್ಯ ಪ್ರೇತತ್ವ ವಿಮೋಕ್ಷಾರ್ಥಂ ಅದ್ಯೇಽಹನಿ ( ಬೇರೆ ದಿನಗಳಲ್ಲಾದರೆ, ತೃತೀಯೇ, ಪಂಚಮೇ ಇತ್ಯಾದಿ ಆಯಾ ದಿನಗಳನ್ನು ಸೇರಿಸಿಕೊಳ್ಳಬೇಕು. ) ನವಶ್ರಾದ್ಧಂ ಕರಿಷ್ಯಾಮಿ ॥ ಎಂದು ಸಂಕಲ್ಪಿಸಿ ದಕ್ಷಿಣಾಭಿಮುಖವಾಗಿ ಕುಳಿತು ತನ್ನ ಎದುರಿನಲ್ಲಿ ಬ್ರಾಹ್ಮಣನ ಬದಲಿಗೆ ಶುದ್ಧವಾದ ಆಸನದ ಮೇಲೆ ಉತ್ತರಾ ಭಿಮುಖವಾಗಿ ಒಂದು ದರ್ಭೆಯ ಕೂರ್ಚವನ್ನಿಟ್ಟು,

———ಗೋತ್ರ ———ಪ್ರೇತ ನವಶ್ರಾದ್ಧೇ ಅಯಂ ತೇ ಕ್ಷಣ ಉಪತಿಷ್ಠತಾಂ ॥

---

### [1] ನವ ಶ್ರಾದ್ಧದ ವಿಚಾರ.

ಕರ್ತೃವು ತಂದೆತಾಯಿಗಳಿಗಾದರೆ ಮೃತದಿನವೊದಲ್ಗೊಂಡು ವಿಷಮ ದಿನ ( 1—3—5—7—9 ) ಗಳಲ್ಲಿ ಸಂಕಲ್ಪದಲ್ಲಿ ಆಯಾ ದಿನಗಳನ್ನು ಹೇಳಿಕೊಂಡು ನವಶ್ರಾದ್ಧವನ್ನು ಮಾಡಬೇಕು

ಬೇರೆಯವರಿಗಾದರೆ ಭರಣಿ, ಕೃತ್ತಿಕೆ, ರೋಹಿಣಿ, ಪುನರ್ವಸು ಉತ್ತರೆ, ವಿಶಾಖೆ, ಉತ್ತರಾಷಾಢಾ, ಪೂರ್ವಾಷಾಢಾ, ಪೂರ್ವಾಭಾದ್ರೆ ಈ ನಕ್ಷತ್ರಗಳಲ್ಲಿಯೂ ಕರ್ತೃವಿನ ತ್ರಿಜನ್ಮನಕ್ಷತ್ರದಲ್ಲಿಯೂ, ಶುಕ್ರ, ಬುಧ, ಗುರು, ಸೋಮ ವಾರಗಳಲ್ಲಿಯೂ ನವಶ್ರಾದ್ಧವನ್ನು ಮಾಡಬಾರದು. ಪ್ರಥಮಾದಿ ದಿನಗಳು ಈ ದೋಷದುಷ್ಟವಾದ್ದರಿಂದ ನವಶ್ರಾದ್ಧವು ಉಳಿದುಹೋದರೆ ಮತ್ತಿನ ನವಶ್ರಾದ್ಧದ ದಿವಸ ಅದನ್ನು ಸೇರಿಸಿ ಮಾಡಿ ಕೊಳ್ಳಬೇಕು. ಯಾವ ದಿನವೂ ದೋಷರಹಿತವಾಗಿಲ್ಲದಿದ್ದರೆ ಮೃತದಿನದಿಂದ

ಎಂದು ಒಂದು ದರ್ಭೆಯನ್ನು ಕೂರ್ಚಬ್ರಾಹ್ಮಣನಿಗೆ ಕೊಟ್ಟು,

——ಗೋತ್ರ ——ಪ್ರೇತ ನವಶ್ರಾದ್ಧೇ ಇದಂ ತೇ ಪಾದ್ಯಮುಪತಿಷ್ಠತಾಂ ॥ ಎಂದು ಪಾದ್ಯವನ್ನು ಕೊಟ್ಟು,

...———ಗೋತ್ರಸ್ಯ ———ಪ್ರೇತಸ್ಯ ನವಶ್ರಾದ್ಧೇ ಆಸನಮುಪತಿಷ್ಠತಾಂ ॥

ಎಂದು ಬ್ರಾಹ್ಮಣನ ಎಡಭಾಗದಲ್ಲಿ ಎಳ್ಳುಸಹಿತ ಒಂದು ದರ್ಭೆಯನ್ನಿಟ್ಟು, ತನ್ನೆದುರಿನಲ್ಲಿ ದಕ್ಷಿಣಾಗ್ರವಾಗಿ ಒಂದು ದರ್ಭೆಯನ್ನೂ, ಅದರಲ್ಲಿ ಒಂದು ಪಾತ್ರವನ್ನೂ ಇಟ್ಟು ಅದರೊಳಗೆ ಒಂದೆಳೆಯ ಕೂರ್ಚವನ್ನು ಹಾಕಿ ನೀರು ತುಂಬಿಸಿ ಎಳ್ಳು ಹಾಕಿ,

.... ...ಗೋತ್ರ .... ...ಪ್ರೇತ ನವಶ್ರಾದ್ಧೇ ಇದಮರ್ಘ್ಯಂ ತವೋಪತಿಷ್ಠತಾಂ ॥ ಎಂದು ಆ ಪಾತ್ರದಿಂದ ಅರ್ಘ್ಯವನ್ನು ಕೊಡಬೇಕು.

.... ...ಗೋತ್ರ .... ...ಪ್ರೇತ ಆಚ್ಛಾದನ ಮುಪತಿಷ್ಠತಾಂ ॥

ಎಂದು ಒಂದು ದರ್ಭೆಯನ್ನು ಕೊಟ್ಟು, ತುಪ್ಪಮಿಶ್ರವಾದ ಅನ್ನವನ್ನು ಕೈಯಲ್ಲಿ ತೆಗೆದು, .... ...ಗೋತ್ರಾಯ .... ...ಪ್ರೇತಾಯ ಸ್ವಾಹಾ ॥

ಎಂದು ಕೂರ್ಚಬ್ರಾಹ್ಮಣನ ಬಲಕೈಯಲ್ಲಿ ಹೋಮಿಸಿ,

.... ...ಗೋತ್ರಾಯ ......ಪ್ರೇತಾಯ ನವಶ್ರಾದ್ಧೇ ದಾಸ್ಯಮಾನ ಮಾಮಂ ಯಥಾಶಕ್ತಿಸೋಪಸ್ಕರಂ ( ತನ್ನಿಷ್ಕ್ರಯಂ ವಾ ) ಸೋದಕುಂಭಂ ಸದಕ್ಷಿಣಮುಪತಿಷ್ಠತಾಂ ॥

---

ಹನ್ನೊಂದನೇ ದಿವಸ, ಮೊದಲುಳಿದ ಐದು ನವಶ್ರಾದ್ಧಗಳನ್ನೂ ಒಟ್ಟಿಗೆ ಮಾಡಬೇಕು. ಈ ನವಶ್ರಾದ್ಧಕ್ಕೆ ಚಂದ್ರಾಷ್ಟಮವೂ, ವಿಪತ್ಪ್ರತ್ಯರವಧಾತಾರೆಗಳು ಕೂಡಾ ಪ್ರಶಸ್ತಗಳಾಗಿವೆ. ಈ ಕಾಲವಿಚಾರವನ್ನು ತಂದೆತಾಯಿಗಳ ಹೊರತು ಬೇರೆಯಾರಿಗಾದರೂ, ಪರೋಕ್ಷಮರಣವಿಷಯದಲ್ಲಿ ಮಾತ್ರ ಮಾಡಬೇಕಷ್ಟೆ ಹೊರತು ಪ್ರತ್ಯಕ್ಷಮರಣವಿಷಯದಲ್ಲಿ ಮಾಡುವುದು ಆವಶ್ಯವಿಲ್ಲವೆಂಬುದಕ್ಕೆ " ಪರೋಕ್ಷೇ ಸೂಕ್ಷ್ಮತಃ ಪಶ್ಯೇತ್ ಪ್ರತ್ಯಕ್ಷೇತು ನ ಕಿಂಚನ । ವೃಥೇ ಕರ್ಮಣಿ ತು ಪ್ರಾಪ್ತೇ ಕಾಲದೋಷಂ ನ ಚಿಂತಯೇತ್ ॥ ಎಂಬ ಈ ಸ್ಮೃತಿವಚನವು ಪ್ರಮಾಣವಾಗಿದೆ.

ಎಂದು ಅಕ್ಕಿ, ಬಾಳೆಕಾಯಿ, ತೆಂಗಿನಕಾಯಿ, ದಕ್ಷಿಣೆ, ಜಲಪಾತ್ರೆ ಮೊದಲಾದವುಗಳೊಂದಿಗೆ ತಿಲೋದಕವನ್ನು ಕೊಡಬೇಕು.

ಆಮೇಲೆ ಪಿಂಡದಾನಕ್ಕೆ ಒಂದು ದರ್ಭೆಯನ್ನು ನೆಲದಲ್ಲಿಟ್ಟು ಪ್ರೋಕ್ಷಿಸಿ ಗೋತ್ರ ನಾಮೋಚ್ಚಾರಣ ಪೂರ್ವಕ ಮೊದಲಿನಂತೆ ಆಸನವನ್ನು ಕೊಟ್ಟು ಆವಾಹಿಸಿ.

........ಗೋತ್ರ ........ಪ್ರೇತ ಪಿಂಡಾದೌ ಏತತ್ತೇ ತಿಲೋದಕ ಮುಪತಿಷ್ಠತಾಂ ||

ಎಂದು ತಿಲೋದಕವನ್ನು ಕೊಟ್ಟು,

.. ........ಗೋತ್ರಾಯ ... .. ...ಪ್ರೇತಾಯ ಅದ್ಯೇಽಹನಿ ನವ ಶ್ರಾದ್ಧೇಽಯಂ ಸಕ್ತುಪಿಂಡ ಉಪತಿಷ್ಠತಾಂ ||

ಎಂದು ಪಿಂಡದಾನ ಮಾಡಿ, ತದುಪರಿ ತಿಲೋದಕ ಮುಪತಿಷ್ಠತಾಂ ||

ಎಂದು ಪಿಂಡದಮೇಲೆ ತಿಲೋದಕ ಕೊಟ್ಟು, ( ಉಪ ) ಪಿಂಡಹಿಡಿದು ಅಷ್ಟಾಕ್ಷರಾದಿ ಮಂತ್ರಗಳನ್ನು ಜಪಿಸಿ, ( ಪ್ರಾಚೀ ) ಗೋತ್ರನಾಮಗಳನ್ನುಚ್ಚರಿಸುತ್ತಾ ನಿತ್ಯಬಲಿಶ್ರಾದ್ಧದಲ್ಲಿ ಪಿಂಡಕ್ಕೆ ಅರ್ಪಿಸಿದಂತೆ ಇದರಲ್ಲಿಯೂ ಅಭ್ಯಂಜನ ಅಂಜನ, ವಸ್ತ್ರಕ್ಕೆ ಉತ್ತರೀಯದ ನೂಲು, ತುಳಸೀದಳ, ಭೃಂಗರಾಜಪತ್ರ, ದೂರ್ವಾದಳಗಳನ್ನು ಪಿಂಡಕ್ಕೆ ಅರ್ಪಿಸಬೇಕು.

.. ...ಗೋತ್ರಾಯ ——ಪ್ರೇತಾಯ ನವಶ್ರಾದ್ಧೇ ದಕ್ಷಿಣೋಪತಿಷ್ಠತಾಂ || ಎಂದು ದಕ್ಷಿಣೆಯನ್ನು ಕೊಟ್ಟು, ಅನಾದಿನಿಧನೋ——ಭವ ||

ಎಂದು ಪ್ರಾರ್ಥಿಸಿ "ಅಭಿರಮ್ಯತಾಂ" ಎಂದು ಹೇಳಿ "ಅಭಿರತಾಃಸ್ಮಃ" ಎಂಬ ಉತ್ತರವನ್ನು ಪಡೆದು ವಾಯಸಬಲಿ ಮೊದಲಾದ ಕೆಲಸವನ್ನು ನಿತ್ಯಬಲಿ ಶ್ರಾದ್ಧದ ಕ್ರಮದಲ್ಲಿ ಮಾಡಿ ಪಿಂಡೋದ್ವಾಸನವನ್ನು ಮಾಡಿ ಮಿಂದು ಉಟ್ಟಬಟ್ಟೆಗಳನ್ನು ಉದಗಗ್ರವಾಗಿ ಒಣಗಲು ಬಿಡಿಸಬೇಕು.

ಈ ಪ್ರಥಮದಿನದಲ್ಲಿ ತಿಲಾಂಜಲ್ಯಾದಿಗಳನ್ನು ಮಾಡಿದ ಕರ್ತೃ, ಅವನ ಭೋಜನಸ್ಥಾನ, ಪಿಂಡಪ್ರದಾನಮಾಡಿದ ಸ್ಥಳ, ಹವಿಸ್ಸನ್ನು ಬೇಯಿಸಿದ ಪಾತ್ರ, ಆ ದಿವಸ ಉಪಯೋಗಿಸಿದ ದ್ರವ್ಯ ಇವುಗಳೆಲ್ಲ ಹತ್ತುದಿನಗಳವರೆಗೂ ಎಂದೂ ವ್ಯತ್ಯಸ್ತಗಳಾಗಬಾರದು.

ಹೀಗೆ ನವ ( ವಿಷಮ ) ಶ್ರಾದ್ಧವು.

**ಇಷ್ಟು ಪ್ರಥಮದಿನ ಮಾಡಬೇಕಾದ ಕ್ರಮವು.**

## ಶ್ಮಶಾನಾಗ್ನಿಯು ನಾಶವಾಗಿದ್ದರೆ ಪ್ರಾಯಶ್ಚಿತ್ತ.

ಕರ್ತೃವು * ಅಸ್ಥಿಸಂಚಯನದ ದಿನ ಪೂರ್ವಾಹ್ಣದಲ್ಲಿ, ಬೇಕಾದ ಸಾಮಾನುಗಳೊಂದಿಗೆ ಶ್ಮಶಾನಕ್ಕೆ ಹೋಗಿ, ಕೈಯಲ್ಲಿ ಜಲಪಾತ್ರದ ನೀರನ್ನು ತೆಗೆದು,

ಓಂ ಅಪಹತಾ ಅಸುರಾ ರಕ್ಷಾಗ್ಂಸಿ ಪಿಶಾಚಾ ಯೇ ಕ್ಷಯಂತಿ ಪೃಥಿವೀಮನು । ಅನ್ಯತ್ರೇತೋ ಗಚ್ಛಂತು ಯತ್ರೈಷಾಂ ಗತಂ ಮನಃ ॥

ಎಂದು ಶ್ಮಶಾನದ ಭಸ್ಮವನ್ನೆಲ್ಲಾ ಪ್ರೋಕ್ಷಿಸಿ,

ಓಂ ಅಯಂ ತೇ ಯೋನಿರ್ಋತ್ವಿಯೋ ಯತೋ ಜಾತೋ ಅರೋಚಥಾಃ । ತಂ ಜಾನನ್ನಗ್ನ ಆಸೀದಾಥಾನೋ ವರ್ಧಯಾ ಗಿರಃ ॥

ಎಂದು ಆ ಭಸ್ಮವನ್ನು ಒಂದು ಸಮಿಧೆಗೆ ಹಚ್ಚಿ, ಗೋಮಯದಿಂದ

---

### * ಅಸ್ಥಿಸಂಚಯನದ ಕಾಲ.

ಪ್ರಥಮ, ದ್ವಿತೀಯ, ತೃತೀಯ, ಸಪ್ತಮ, ನವಮ ದಿನಗಳಲ್ಲಿ (1) ದ್ವಿಪಾದ (2) ತ್ರಿಪಾದ ನಕ್ಷತ್ರಗಳನ್ನೂ, ಕರ್ತೃವಿನ ಜನ್ಮಾನುಜನ್ಮ ತ್ರಿಜನ್ಮ ನಕ್ಷತ್ರಗಳನ್ನೂ, ಸಾಧ್ಯವಿದ್ದರೆ ರವಿ, ಕುಜ, ಶುಕ್ರ, ಶನಿವಾರಗಳನ್ನೂ (3) ನಂದಾತಿಥಿಗಳನ್ನೂ ಬಿಡಬೇಕು. ಅಸ್ಥಿಸಂಚಯನಕ್ಕೆ ಮೃತದಿನದಿಂದ ನಾಲ್ಕನೇ ದಿನವು ಪ್ರಶಸ್ತವಾದ್ದರಿಂದ ಆ ದಿನ ಮಾಡುವುದು ಉತ್ತಮ. ಕಾರಣಾಂತರದಿಂದ ಆ ದಿನವು ತಪ್ಪಿಹೋದರೆ— ಪೂರ್ವಾ, ಪೂರ್ವಾಷಾಢಾ, ಉತ್ತರಾಭಾದ್ರಾ, ಪುಷ್ಯ, ಹಸ್ತ, ಆಶ್ಲೇಷಾ ಈ ನಕ್ಷತ್ರಗಳನ್ನು ಬಿಟ್ಟು, ಕೃಷ್ಣಪಕ್ಷದಲ್ಲಿ ದಶಮಿಯಿಂದ ಮೇಲೆ ಅಯುಗ್ಮ (ಏಕಾದಶೀ,

---

(1) ದ್ವಿಪಾದ ನಕ್ಷತ್ರಗಳು— ಮೃಗಶಿರ, ಚಿತ್ರಾ, ಧನಿಷ್ಠೆ. (2) ತ್ರಿಪಾದ ನಕ್ಷತ್ರಗಳು— ಕೃತ್ತಿಕೆ, ಪುನರ್ವಸು, ಉತ್ತರೆ, ವಿಶಾಖೆ, ಉತ್ತರಾಷಾಢಾ, ಪೂರ್ವಾಭಾದ್ರೆ. (3) ನಂದಾತಿಥಿಗಳು— ಪಾಡ್ಯ, ಷಷ್ಠೀ, ಏಕಾದಶೀ ತಿಥಿಗಳು.

ಸ್ಥಳವನ್ನು ಶುದ್ಧಮಾಡಿ ಲೌಕಿಕಾಗ್ನಿಯನ್ನು ಪ್ರತಿಷ್ಠಾಪಿಸಿ ಅದರಲ್ಲಿ ಆ ಸವಿುಧೆಯನ್ನು ಹೋಮಿಸಲಿಕ್ಕಿರುವ ಮಂತ್ರಗಳು—

ಓಂ ಆಜುಹ್ವಾನಸ್ಸುಪ್ರತೀಕಃ ಪುರಸ್ತಾದಗ್ನೇ ಸ್ವಾಂ ಯೋನಿಮಾಸೀದ ಸಾಧ್ಯಾ । ಅಸ್ಮಿನ್‌ತ್ಸಧಸ್ಥೇ ಅಧ್ಯುತ್ತರಸ್ಮಿನ್ ವಿಶ್ವೇದೇವಾ ಯಜಮಾನಶ್ಚ ಸೀದತ ॥ ಓಂ ಉದ್ಬುಧ್ಯಸ್ವಾಗ್ನೇ ಪ್ರತಿಜಾಗೃಹ್ಯೇ ನ ಮಿಷ್ಟಾಪೂರ್ತೇ ಸಗ್‌ಂಸೃಜೇಥಾಮಯಂ ಚ । ಪುನಃ ಕೃಣ್ವಗ್‌ಂಸ್ತ್ವಾ ಪಿತರಂ ಯುವಾನ ಮನ್ವಾತಾಗ್‌ಂಸೀ ತ್ವಯಿ ತಂತುಮೇತಂ ॥

ಎಂದು ಹೋಮಿಸಿ, ಓಂ ಸ್ವಸ್ತಿ ಶ್ರೀಮದ್ಭ ........ ಸಿಧ್ಯರ್ಥಂ ದಹನ ದಿನಾದಾರಭ್ಯ ಅಸ್ಥಿಸಂಚಯನಮಧ್ಯೇ ಅಗ್ನ್ಯುದ್ವಾತಪ್ರಾಯಶ್ಚಿತ್ತ ಹೋಮಂ ಕರಿಷ್ಯಾಮಿ । ಎಂದು ಸಂಕಲ್ಪಿಸಿ ಪರಿಸ್ತರಣವಿಟ್ಟು ಆಜ್ಯಸಂಸ್ಕಾರವನ್ನೂ, ಸ್ರುಕ್‌ಸ್ರುವ ಸಂಮಾರ್ಜನ, ಮತ್ತು ಅಗ್ನ್ಯಲಂಕರಣವನ್ನು ಕೂಡ ಮಾಡಿ "ಓಂ ಭೂಸ್ವಾಹಾ" ಇತ್ಯಾದಿ ನಾಲ್ಕು ವ್ಯಾಹೃತಿಗಳಿಂದ ಆಜ್ಯವನ್ನು ಹೋಮಿಸಿ ಪ್ರಾಯಶ್ಚಿತ್ತಾಜ್ಯಾಹುತಿ ಕೊಡಲಿಕ್ಕಿರುವ ಮಂತ್ರಗಳು—

---

ತ್ರಯೋದಶೀ, ಅಮಾವಾಸ್ಯೆ ) ತಿಥಿಗಳಲ್ಲಿ ಕರ್ತೃವಿನ ವಿಪತ್, ಪ್ರತ್ಯರ, ವಧಾತಾರೆಗಳ ವಿಷಯದಲ್ಲಿ "ಗೋ ಮಾಂ ಸಂ ಕೇವಲಂ ತ್ಯಾಜ್ಯಂ" ಎಂಬ ಶಾಸ್ತ್ರವನ್ನನುಸರಿಸಿ ಮಾಡಬೇಕು. ಯಾವ ದಿನವೂ ದೋಷವರ್ಜಿತವಾಗದಿದ್ದರೆ, "ದ್ವಿಜವಾಕ್ಯಾನು ಶಾಸನಾತ್" ಎಂಬ ಶಾಸ್ತ್ರವಚನಾನುಸಾರ ಬ್ರಾಹ್ಮಣರು ಹೇಳಿದ ಮೇರೆಗೆ ಪೂರ್ವಾಹ್ನದಲ್ಲಿ ಅಸ್ಥಿಸಂಚಯನವನ್ನು ಮಾಡುವುದು ಉತ್ತಮ. ಅಸ್ಥಿಸಂಚಯನಕ್ಕಿಂತ ಮೊದಲು ಶ್ಮಶಾನಾಗ್ನಿಯು ನಾಶವಾಗಿದ್ದರೆ ಮೇಲೆಹೇಳಿದ ಪ್ರಾಯಶ್ಚಿತ್ತವನ್ನು ಮಾಡಿ ಅಸ್ಥಿಸಂಚಯನವನ್ನು ಮಾಡಬೇಕು.

ಓಂ ಅಯಾಶ್ಚಾಗ್ನೇಸ್ಯನಭಿಶಸ್ತೀಶ್ಚ ಸತ್ಯ ಮಿತ್ವಮಯಾ ಅಸಿ ।

ಅಯಾಸಾ ವಯಸಾ ಕೃತೋಽಯಾಸನ್ ಹವ್ಯಮೂಹಿಷೇಽಯಾನೋಧೇಹಿ

ಭೇಷಜಂ ಸ್ವಾಹಾ॥ ಅಗ್ನಯೇ ಅಯಾಸ ಇದಂ ನ ಮಮ ॥

ಆಮೇಲೆ ಸ್ರುವದಿಂದ ನಾಲ್ಕುಸಲ ಸ್ರುಕ್ಕಿಗೆ ತುಪ್ಪವನ್ನೆರೆದು ಕೈಯಲ್ಲಿ ಸ್ರುಕ್ಕನ್ನು ತೆಗೆದುಕೊಂಡು,

ಓಂ ಅಗ್ನಿರ್ಹೋತಾ । ಅಗ್ನಿ ನಾಧ್ವರ್ಯುರ್ಃ । ತ್ವಷ್ಟಾಗ್ನೀತ್ । ಮಿತ್ರ ಉಪವಕ್ತಾ । ಸೋಮಸ್ಸೋಮಸ್ಯ ಪುರೋಗಾಃ । ಶುಕ್ರಶ್ಶುಕ್ರಸ್ಯ ಪುರೋಗಾಃ । ಶ್ರಾತಾಸ್ತ ಇಂದ್ರ ಸೋಮಾಃ । ವಾತಾಪೇರ್ಹವನ ಶ್ರುತ ಸ್ವಾಹಾ ॥ ಎಂದು ಹೋಮಿಸಿ,

ವಾಚಸ್ಪತಯೇ ಬ್ರಹ್ಮಣ ಇದಂ ನ ಮಮ ॥

ಎಂದು ಹೇಳಿ ಪುನಃ ಸ್ರುವದಿಂದ ಹೋಮಿಸಲಿ ರುನ ಮಂತ್ರಗಳು—

ಓಂ ಬ್ರಾಹ್ಮಣ ಏಕ ಹೋತಾ । ಸ ಯಜ್ಞಃ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ಯಜ್ಞಶ್ಚ ಮೇ ಭೂಯಾತ್ಸ್ವಾಹಾ । ಬ್ರಹ್ಮಣ ಇದಂ ನ ಮಮ ॥

ಓಂ ಅಗ್ನಿರ್ದ್ವಿಹೋತಾ । ಸ ಭರ್ತಾ । ಸ ಮೇದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ಭರ್ತಾ ಚ ಮೇ ಭೂಯಾತ್ಸ್ವಾಹಾ ॥ ಅಗ್ನಯ ಇದಂ ನ ಮಮ ॥

ಓಂ ಪೃಥಿವೀ ತ್ರಿಹೋತಾ । ಸ ಪ್ರತಿಷ್ಠಾ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ಪ್ರತಿಷ್ಠಾ ಚ ಮೇ ಭೂಯಾತ್ಸ್ವಾಹಾ । ಪೃಥಿವ್ಯಾ ಇದಂ ನ ಮಮ ॥

ಓಂ ಅಂತರಿಕ್ಷಂ ಚತುರ್ಹೋತಾ । ಸ ವಿಷ್ಠಾಃ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ವಿಷ್ಠಾಶ್ಚಮೇ ಭೂಯಾತ್ಸ್ವಾಹಾ ॥ ಅಂತರಿಕ್ಷಾಯೇದಂ ನ ಮಮ ॥

ಓಂ ವಾಯುಃ ಪಂಚಹೋತಾ । ಸ ಪ್ರಾಣಃ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ಪ್ರಾಣಶ್ಚಮೇ ಭೂಯಾತ್ಸ್ವಾಹಾ ॥ ವಾಯವ ಇದಂ ನ ಮಮ ॥

ಓಂ ಚಂದ್ರಮಾಷ್ಷಡ್ಢೋತಾ । ಸ ಋತೂನ್ ಕಲ್ಪಯಾತಿ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ಋತವಶ್ಚ ಮೇ ಕಲ್ಪಂತಾಗ್ಸ್ವಾಹಾ ॥ ಚಂದ್ರಮಸ ಇದಂ ನ ಮಮ ॥

ಓಂ ಅನ್ನಗ್ಂ ಸಪ್ತಹೋತಾ । ಸ ಪ್ರಾಣಸ್ಯಪ್ರಾಣಃ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ಪ್ರಾಣಸ್ಯ ಚ ಮೇ ಪ್ರಾಣೋ ಭೂಯಾತ್ಸ್ವಾಹಾ । ಅನ್ನಾಯೇದಂ ನ ಮಮ ॥

ಓಂ ದ್ಯೌರಸ್ಯಹೋತಾ ॥ ಸೋಽನಾಧೃಷ್ಯಃ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂ ಯಶಃ । ಅನಾಧೃಷ್ಯಶ್ಚ ಭೂಯಾಸಗ್ ಸ್ವಾಹಾ । ದಿವ ಇದಂ ನ ಮಮ ॥

ಓಂ ಆದಿತ್ಯೋ ನವಹೋತಾ । ಸ ತೇಜಸ್ವೀ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂಯಶಃ । ತೇಜಸ್ವೀ ಚ ಭೂಯಾಸಗ್ ಸ್ವಾಹಾ ಆದಿತ್ಯಾಯೇದಂ ನ ಮಮ ॥

ಓಂ ಪ್ರಜಾಪತಿರ್ದಶಹೋತಾ । ಸ ಇದಗ್ಂ ಸರ್ವಂ । ಸ ಮೇ ದದಾತು ಪ್ರಜಾಂ ಪಶೂನ್ ಪುಷ್ಟಿಂಯಶಃ । ಸರ್ವಂ ಚ ಮೇ ಭೂಯಾತ್ಸ್ವಾಹಾ । ಪ್ರಜಾಪತಯ ಇದಂ ನ ಮಮ ॥

ಓಂ ಮನೋ ಜ್ಯೋತಿರ್ಜುಷತಾಮಾಜ್ಯಂ ವಿಚ್ಛಿನ್ನಂ ಯಜ್ಞಗ್ಂಸಮಿಮಂ ದಧಾತು ॥ ಯಾ ಇಷ್ಟಾ ಉಷಸೋ ನಿಮ್ರುಚಶ್ಚ ತಾಸ್ಸಂದಧಾಮಿ ಹವಿಷಾ ಘೃತೇನ ಸ್ವಾಹಾ ॥ ಮನಸೇ ಜ್ಯೋತಿಷ ಉಷೋಭ್ಯೋ ನಿಮ್ರುಗ್ಭ್ಯಸ್ತಾಭ್ಯ ಇದಂ ನ ಮಮ ॥

ಓಂ ಯನ್ಮ ಆತ್ಮನೋ ಮಿಂದಾಭೂದಗ್ನಿಸ್ತತ್ಪುನರಾಹಾರ್ಜಾತವೇದಾ ವಿಚರ್ಷಣಿಸ್ಸ್ವಾಹಾ । ಜಾತವೇದಸೇ ವಿಚರ್ಷಣ ಇದಂ ನ ಮಮ ॥ ಓಂ

ಓಂ ಪುನರಗ್ನಿಶ್ಚಕ್ಷುರದಾತ್ಪುನರಿಂದ್ರೋ ಬೃಹಸ್ಪತಿಃ । ಪುನರ್ಮೇ ಅಶ್ವಿನಾ ಯುವಂ ಚಕ್ಷುರಾಧತ್ತಮಕ್ಷ್ಯೋಸ್ಸ್ವಾಹಾ ॥ ಅಗ್ನೀಂದ್ರ ಬೃಹಸ್ಪತ್ಯಶ್ವಿಭ್ಯ ಇದಂ ನ ಮಮ ॥

ಓಂ ಭೂರಗ್ನಯೇ ಚ ಪೃಥಿವ್ಯೈ ಚ ಮಹತೇ ಚ ಸ್ವಾಹಾ । ಅಗ್ನಯೇ ಪೃಥಿವ್ಯೈ ಮಹತ ಇದಂ ನ ಮಮ ॥

ಓಂ ಭುವೋ ವಾಯವೇಽಂತರಿಕ್ಷಾಯ ಚ ಮಹತೇ ಚ ಸ್ವಾಹಾ । ವಾಯವೇಽಂತರಿಕ್ಷಾಯ ಮಹತ ಇದಂ ನ ಮಮ ॥

ಓಂ ಸುವರಾದಿತ್ಯಾಯ ಚ ದಿವೇ ಚ ಮಹತೇ ಚ ಸ್ವಾಹಾ । ಆದಿತ್ಯಾಯ ದಿವೇ ಮಹತ ಇದಂ ನ ಮಮ ॥

ಓಂ ಭೂರ್ಭುವಸ್ಸುವಶ್ಚಂದ್ರಮಸೇ ಚ ನಕ್ಷತ್ರೇಭ್ಯಶ್ಚ ದಿಗ್ಭ್ಯಶ್ಚ ಮಹತೇ ಚ ಸ್ವಾಹಾ ॥ ಚಂದ್ರಮಸೇ ನಕ್ಷತ್ರೇಭ್ಯೋ ದಿಗ್ಭ್ಯೋ ಮಹತ ಇದಂ ನ ಮಮ ॥

ಓಂ ಭೂಸ್ಸ್ವಾಹಾ ............ ॥ ಇತ್ಯಾದಿ ನಾಲ್ಕು ವ್ಯಾಹೃತಿಗಳಿಂದಲೂ ಹೋಮಿಸಿ ಹೋಮಶೇಷವನ್ನು ಮುಗಿಸಿ ಅಸ್ಥಿಸಂಚಯವನ್ನು ಮಾಡಬೇಕು.

– ಹೀಗೆ ಪ್ರಾಯಶ್ಚಿತ್ತವು –

# ಅಸ್ಥಿ ಸಂಚಯನ.

ಅಸ್ಥಿಗಳಿಗೆ ನಾಯಿ, ಹಂದಿ, ಶೂದ್ರ ಮೊದಲಾದವರ ಸ್ಪರ್ಶವಾಗಿದ್ದರೆ ಪಂಚಗವ್ಯವನ್ನೂ, ಶಾಲಗ್ರಾಮ - ತುಳಸೀತೀರ್ಥಗಳನ್ನೂ ತೆಗೆದು ಪ್ರೋಕ್ಷಿಸಿ ಅಲ್ಲಿ ಕುಳಿತು ( ಉಪ ) ಆಚಮನವನ್ನೂ, ತೂಷ್ಣೀಯಲ್ಲಿ ಪ್ರಾಣಾಯಾಮ ವನ್ನು ಕೂಡ ಮಾಡಿ—

ಸ್ವಸ್ತಿ ಶ್ರೀಮದ್ಭಗ ............ ಸಿಧ್ಯರ್ಥಂ ( ಪ್ರಾಚೀ ) ............ ಗೋತ್ರಸ್ಯ ............ ಪ್ರೇತಸ್ಯ ಪ್ರೇತತ್ವ ನಿವೃತ್ಯರ್ಥಂ ಅಸ್ಥಿಸಂಚಯನಂ ಕರಿಷ್ಯಾಮಿ । ಎಂದು ಸಂಕಲ್ಪಿಸಿ [ ( ಉಪ ) ಶಿಷ್ಟಾಚಾರದಂತೆ, ಪ್ರಾಯಶ್ಚಿತ್ತಕ್ಕೆ ಯಥಾಶಕ್ತಿ ಸುವರ್ಣವನ್ನು ತೆಗೆದು, ಅನಾದಿನಿಧನೋ ... ...ಭವ ॥ ಎಂದು ಶುದ್ಧವಾದ ನೆಲದಲ್ಲಿಟ್ಟು ನಮಸ್ಕರಿಸಿ ( ಪ್ರಾಚೀ ) ... ... ಗೋತ್ರಸ್ಯ ............ ಪ್ರೇತಸ್ಯ ಪ್ರೇತತ್ವ ನಿವೃತ್ಯರ್ಥಂ ಅಸ್ಥಿಸಂಚಯನಾಖ್ಯಂ ಕರ್ಮ ಕರ್ತುಂ ಮಮ ಅಧಿಕಾರಸಂಪದಸ್ತ್ವಿತಿ ಭವಂತೋಽನುಗೃಹ್ಣಂತು ಎಂದು ಹೇಳಿ " ಅಸ್ತು " ಎಂಬ ಅನುಜ್ಞೆಯನ್ನು ಪಡೆಯಬೇಕು ] ಶಮೀಶಾಖೆಯಿಂದ ಹಾಲುಮಿಶ್ರಿತವಾದ ನೀರನ್ನು ಪಾದದೇಶದಿಂದ ಮೊದಲ್ಗೊಂಡು ಚಿತಿದೇಶಕ್ಕೆ ಮೂರುಸಲ ಅಪ್ರದಕ್ಷಿಣ ಬರುತ್ತಾ ಪ್ರೋಕ್ಷಿಸಲಿಕ್ಕಿರುವ ಮಂತ್ರ—

ಶೀತಿಕೇ ಇತಿ ದಮನೋಽಗ್ನಿಸ್ತ್ರಿಷ್ಟುಪ್ ಚಿತಿಪ್ರೋಕ್ಷಣೇ ವಿನಿಯೋಗಃ—

ಓಂ ಶೀತಿಕೇ ಶೀತಿಕಾವತಿ ಹ್ಲಾದಿಕೇ ಹ್ಲಾದಿಕಾವತಿ । ಮಂಡೂಕ್ಯಾ ಸು
ಸುಸಂಗಮ ಇಮಂ ಸ್ವಾಗ್ನಿಂ ಹರ್ಷಯ ॥

ಈ ಮಂತ್ರವನ್ನು ಪ್ರತಿಯೊಂದು ಪ್ರೋಕ್ಷಣೆಗೂ ಆವರ್ತಿಸುತ್ತಾ ಪ್ರೋಕ್ಷಿಸಿ

ಕರ್ತೃಸಹಿತ ಹಿರಿಯರು ವಿಷಮ ( 1—3—5—7—9—11 ಇತ್ಯಾದಿ ) ಸಂಖ್ಯೆಯವರಾಗಿ ಅಂಗುಷ್ಠ ಮತ್ತು ಅನಾಮಿಕೆಗಳಿಂದ ಒಂದೊಂದೇ ಎಲುಬನ್ನು ಪಾದವೊದಲ್ಗೊಂಡು ಶಿರೋದೇಶದವರೆಗೆ ಹೆಕ್ಕಿತೆಗೆದು [ ಸ್ತ್ರೀಯರದ್ದಾದರೆ, ಸ್ತನ ( ಮೊಗಡು ) ವಿರುವ ] ಹೊಸ ಮಣ್ಣಿನ ಪಾತ್ರದಲ್ಲಿ ಶಬ್ದವಾಗದಹಾಗೆ ಇಡಬೇಕು. ಗೆಠಸೆಯಿಂದ ಶೋಧಿಸಿ (ಗೇರಿ) ಎಲ್ಲಾ ಎಲುಬುಗಳನ್ನು ಹೆಕ್ಕಿ ಪಾತ್ರದಲ್ಲಿಟ್ಟು ಸಾಧ್ಯವಿದ್ದರೆ ಭಸ್ಮವನ್ನು ಗಂಗೆಯಲ್ಲಿ ಹಾಕಬೇಕು. ಅನಂತರ ತುಂಬಾ ದರ್ಭೆಗಳು ಹುಟ್ಟಿಬೆಳೆದುಕೊಂಡಿರುವ ಭೂಮಿಯಲ್ಲಿ ಹೊಂಡವನ್ನು ತೋಡಿ,

ಉಪಸರ್ಪೇತಿ ಸಂಕುಸುಕಃ ಪೃಥವೀ ವೃತ್ಯುಃ ಪಿತರೋ ವಾ ತ್ರಿಷ್ಟುಪ್ ಗರ್ತೇಽಸ್ಥಿಕುಂಭನಿಕ್ಷೇಪಣೇ ವಿನಿಯೋಗಃ—

ಓಂ ಉಪಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ ! ಊರ್ಣಮ್ರದಾ ಯುವತಿರ್ದಕ್ಷಿಣಾವತ ಏಷಾ ತ್ವಾ ಪಾತು ನಿರ್ಋತೇರುಪಸ್ಥಾತ್ ||

ಎಂಬ ಮಂತ್ರದಿಂದ ಕರ್ತೃವು ಆಹೊಂಡದಲ್ಲಿ ಆ ಅಸ್ಥಿಯಪಾತ್ರವನ್ನಿಡಬೇಕು. ಆ ಮೇಲೆ,

ಉಚ್ಛ್ವಂಚಸ್ವೇತಿ ಸಂಕುಸುಕೋ ಮೃತ್ಯುಃ ಪಿತರಃ ಪೃಥಿವ್ಯೇ ವಾ ಪ್ರಸ್ತಾರ ಪಙ್ಕ್ತಿಃಗರ್ತೇ ಪಾಂಸುಕ್ಷೇಪಣೇ ವಿನಿಯೋಗಃ—

ಓಂ ಉಚ್ಛ್ವಂಚಸ್ವ ಪೃಥಿವಿ ಮಾ ನಿಬಾಧಥಾಸ್ಸೂಪಾಯನಾಽಸ್ಮೈಭವ ಸೂಪವಂಚನಾ । ಮಾತಾ ಪುತ್ರಂ ಯಥಾ ಸಿಚಾಭ್ಯೇನಂ ಭೂಮ

ಊರ್ಣಾಹಿ ॥ ಎಂದು ಪಾತ್ರದ ಸುತ್ತಲು ಮಣ್ಣನ್ನು ಹಾಕಿ,

ಉಚ್ಛ್ವಂಚಮಾನೇತಿ ಸಂಕುಸುಕಃ ಪೃಥಿವೀ ಮೃತ್ಯುಃ ಪಿತರೋ ವಾ ಜಗತೀ ಅಸ್ಥಿಕುಂಭಸಮೀಪೇ ಜಪೇ ವಿನಿಯೋಗಃ ॥

ಓಂ ಉಚ್ಛ್ವಂಚಮಾನಾ ಪೃಥಿವೀ ಸುತಿಷ್ಠತು ಸಹಸ್ರಂ ಮಿತ ಉಪ ಹಿ ಶ್ರಯಂತಾಂ । ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾಸ್ಮೈ ಶರಣಾಸ್ಸಂತ್ವತ್ರ ॥ ಈ ಮಂತ್ರವನ್ನು ಕೈಮುಗಿದು ಜಪಿಸಿ,

ಉತ್ತೇ ಸ್ತಭ್ನಾಮೀತಿ ಸಂಕುಸುಕಃ ಪೃಥಿವೀ ಪಿತರೋ ಮೃತ್ಯುರ್ವಾ ತ್ರಿಷ್ಟುಪ್ ಕಪಾಲೇನ ಘಟಸ್ಯ ಮುಖಪಿಧಾನೇ ವಿನಿಯೋಗಃ —

ಓಂ ಉತ್ತೇ ಸ್ತಭ್ನಾಮಿ ಪೃಥಿವೀಂ ತ್ವತ್ಪರೀಮಂ ಲೋಗಂ ನಿದಧನ್ಮೋ ಅಹಂ ರಿಷಂ । ಏತಾಂ ಸ್ಥೂಣಾಂ ಪಿತರೋ ಧಾರಯಂತು ತೇ ತ್ರಾ ಯಮಸ್ಸಾದನಾ ತೇ ಮಿನೋತು ॥

ಎಂದು ಆ ಪಾತ್ರಕ್ಕೆ ಮತ್ತೊಂದು ಹೊಸಪಾತ್ರವನ್ನು ಮುಚ್ಚಬೇಕು. ಅನಂತರ ಆ ಪಾತ್ರಗಳು ಕಾಣದಹಾಗೆ ಸಂಪೂರ್ಣ ಮಣ್ಣಿನಿಂದ ಮುಚ್ಚಿ ಹಿಂದೆ ನೋಡದೆ ಬೇರೆಕಡೆಗೆ ಹೋಗಿ ಮಿಾಯಬೇಕು. ಅನಂತರ ಶ್ಮಶಾನದೇಶವನ್ನು ಗೋಮಯದಿಂದ ಶುದ್ಧಮಾಡಿ ಶ್ಮಶಾನವನ್ನೇ ದಕ್ಷಿಣಾಗ್ರವಾದ ತ್ರಿಕೋಣಾ ಕಾರದ ವೇದಿಕೆಯನ್ನಾಗಿ ಮಾಡಿ ಅರಸಿನ ಹುಡಿಯಿಂದ ಅಲಂಕರಿಸಿ (ಉಪ)

ದೇಶಕಾಲಗಳನ್ನುಚ್ಚರಿಸಿ ( ಪ್ರಾಚೀ ) .......... ಗೋತ್ರಸ್ಯ ............ ಪ್ರೇತಸ್ಯ ಪ್ರೇತತ್ವ ನಿವೃತ್ತ್ಯರ್ಥಂ ವೇದಿಕಾರಾಧನಂ ಕರಿಷ್ಯಾಮಿ । ಎಂದು ಸಂಕಲ್ಪಿಸಿ [ ಶಿಷ್ಟಾಚಾರದಂತೆ, ( ಉಪ ) ಪ್ರಾಯಶ್ಚಿತ್ತಕ್ಕೆ ಹಿರಣ್ಯವನ್ನು ತೆಗೆದು, ಅನಾದಿನಿಧನೋ ........ ... ಭವ ॥ ಎಂದು ಹೇಳಿ ಶುದ್ಧವಾದ ನೆಲದಲ್ಲಿಟ್ಟು, ನಮಸ್ಕರಿಸಿ (ಪ್ರಾಚೀ) ... ... ... ಗೋತ್ರಸ್ಯ ............ ಪ್ರೇತಸ್ಯ ಪ್ರೇತತ್ವನಿವೃತ್ತ್ಯರ್ಥಂ ವೇದಿಕಾರಾಧನಂ ಕರ್ತುಂ ಮಮಾಧಿಕಾರ ಸಿದ್ಧಿರಸ್ತ್ವಿತಿ ಭವಂತೋಽನುಗೃಹ್ಣಂತು । ಎಂದು ಹೇಳಿ " ಅಸ್ತು " ಎಂಬ ಅನುಜ್ಞೆಯನ್ನು ಪಡೆಯಬೇಕು. ] ತೂಷ್ಣೀಯಲ್ಲಿ ತಿಲೋದಕವನ್ನು ಕೊಟ್ಟು, ವೇದಿಕೆಯ ನಡುವಿನಲ್ಲಿ ದೊಡ್ಡದಾದ ಒಂದು ಪಿಂಡವನ್ನೂ, ಮತ್ತೊಂದು ಜಲಪೂರ್ಣ ಕುಂಭವನ್ನೂ ಇಡಲಿಕ್ಕಿರುವ ಮಂತ್ರಗಳು—

.... ....... ಗೋತ್ರಾಯ ... ... .. ಪ್ರೇತಾಯ ಭೋಜನಾರ್ಥಮಯಂ ಪಿಂಡ ಉಪತಿಷ್ಠತಾಂ । ಪಾನಾರ್ಥಮುದಕುಂಭಶ್ಚೋಪತಿಷ್ಠತಾಂ ॥

ಎಂದು ಆಯಾ ಮಂತ್ರಾನುಸಾರ ಇಟ್ಟು ಹೀಗೆಯೇ ಅದರ ಪಶ್ಚಿಮ ಭಾಗದಲ್ಲಿ ಒಂದು ಪಿಂಡ, ಮತ್ತೊಂದು ಉದಕುಂಭಗಳನ್ನಿಡಲಿಕ್ಕಿರುವ ಮಂತ್ರ—

ಶ್ಮಶಾನವಾಸಿನೇ ರುದ್ರಾಯಾಯಂ ಪಿಂಡ ಉಪತಿಷ್ಠತಾಂ ।
ಪಾನಾರ್ಥ ಮುದಕುಂಭಶ್ಚೋಪತಿಷ್ಠತಾಂ ॥

ಎಂದಿಟ್ಟು ಅದೇರೀತಿಯಲ್ಲಿ ಅದರ ಉತ್ತರಭಾಗದಲ್ಲಿ ಪಿಂಡೋದಕುಂಭಗಳನ್ನಿಡಲಿಕ್ಕಿರುವ ಮಂತ್ರ—

ಶ್ಮಶಾನವಾಸಿಭ್ಯಃ ಪ್ರೇತೇಭ್ಯ ಅಯಂ ಪಿಂಡ ಉಪತಿಷ್ಠತಾಂ ।
ಪಾನಾರ್ಥಮುದಕುಂಭ ಉಪತಿಷ್ಠತಾಂ ॥

ಎಂದಿಟ್ಟು ಇದೇ ರೀತಿಯಲ್ಲಿ, ಮಧ್ಯದಿಂದ ಮೂಡುಭಾಗದಲ್ಲಿ ಯಾ ದಕ್ಷಿಣಭಾಗದಲ್ಲಿ ಪಿಂಡೋದಕುಂಭಗಳನ್ನಿಡಲಿಕ್ಕಿರುವ ಮಂತ್ರ—

ಪ್ರೇತಸಖಿಭ್ಯ ಅಯಂ ಪಿಂಡ ಉಪತಿಷ್ಠತಾಂ ।
ಪಾನಾರ್ಥಮುದಕುಂಭ ಉಪತಿಷ್ಠತಾಂ ॥

ಎಂದು ಪಿಂಡವನ್ನೂ ನೀರಿನಪಾತ್ರವನ್ನೂ ಜತೆಜತೆಯಾಗಿಟ್ಟು ಪಿಂಡೋದಕುಂಭಗಳನ್ನಿಟ್ಟ ಕ್ರಮದಲ್ಲೇ ಆಯಾ ಮಂತ್ರಾನುಸಾರ ಆಯಾಪಿಂಡೋದಕುಂಭಗಳಮೇಲೆ ತಿಲೋದಕ ಕೊಡಲಿಕ್ಕಿರುವ ಮಂತ್ರಗಳು—

........ ಗೋತ್ರಾಯ ......... ಪ್ರೇತಾಯ ಪಿಂಡೋಪರಿ ತಿಲೋದಕ ಮುಪತಿಷ್ಠತಾಂ ॥

ಶ್ಮಶಾನವಾಸಿನೇ ರುದ್ರಾಯ ಪಿಂಡೋಪರಿ ತಿಲೋದಕಮುಪತಿಷ್ಠತಾಂ ॥
ಶ್ಮಶಾನವಾಸಿಭ್ಯಃ ಪ್ರೇತೇಭ್ಯಃ ಪಿಂಡೋಪರಿ ತಿಲೋದಕಮುಪತಿಷ್ಠತಾಂ ॥
ಪ್ರೇತಸಖಿಭ್ಯಃ ಪಿಂಡೋಪರಿ ತಿಲೋದಕಮು ಪತಿಷ್ಠತಾಂ ॥

ಎಂದು ತಿಲೋದಕ ಕೊಟ್ಟು, ೮-ಪಾದುಕೆ (ಮೇವಡಿ) ಗಳನ್ನೂ, ೪-ಛತ್ರಗಳನ್ನೂ, ಯವಪಿಷ್ಟದಿಂದ ೪-ಪೋಲಿಕೆ (ಹೋಳಿಗೆ) ಗಳನ್ನೂ ತಯಾರಿಸಿ, ಅವುಗಳಲ್ಲಿ ಒಂದು ಪೋಲಿಕೆ, ಎರಡು ಪಾದುಕೆ, ಒಂದು ಛತ್ರ, ಈ ಸಂಖ್ಯೆಯಲ್ಲಿ ಮುಂದೆ ಹೇಳುವ ಎಲ್ಲಾ ದೇವತೆಗಳಿಗೂ ಪೋಲಿಕೆ ಮೊದಲಾದವುಗಳನ್ನು ಆಯಾ ಮಂತ್ರಾನುಸಾರ ವೇದಿಕೆಯ ಮೇಲೆ ಇಡಲಿಕ್ಕಿರುವ ಮಂತ್ರಗಳು—

ಓಂ ಕಾಲಾಯ ದಹನಪತಯೇ ಇದಮುಪತಿಷ್ಠತಾಂ ।
ಓಂ ಮೃತ್ಯವೇ ದಹನಪತಯೇ ಇದಮುಪತಿಷ್ಠತಾಂ ॥
ಓಂ ಯಮಾಯ ದಹನಪತಯೇ ಇದಮುಪತಿಷ್ಠತಾಂ ॥
ಓಂ ಯಮಶ್ವಭ್ಯಾಮಿದಮುಪತಿಷ್ಠತಾಂ ॥

ಎಂದಿಟ್ಟು ನಮಸ್ಕಾರಮಾಡಿ ಮಿಂದು ಅಸ್ಥಿಸಂಚಯನಶ್ರಾದ್ಧವನ್ನು ಮಾಡಬೇಕು.

## ಅಸ್ಥಿಸಂಚಯನಶ್ರಾದ್ಧ.

ಶ್ರಾದ್ಧಮಾಡುವ ಸ್ಥಳವನ್ನು ಗೋಮಯದಿಂದ ಶುದ್ಧಮಾಡಿ ( ಉಪ ) ದೇಶಕಾಲಗಳನ್ನುಚ್ಚರಿಸಿ (ಪ್ರಾಚೀ) ... .. ...ಗೋತ್ರಸ್ಯ ... ...... ಪ್ರೇತಸ್ಯ ಪ್ರೇತತ್ವವಿಮೋಕ್ಷಾರ್ಥಂ ಅಸ್ಥಿಸಂಚಯನಶ್ರಾದ್ಧಂ ಕರಿಷ್ಯಾಮಿ ।। ಎಂದು ಸಂಕಲ್ಪಿಸಿ [ ( ಉಪ ) ಶಿಷ್ಟಾಚಾರದಂತೆ ಪ್ರಾಯಶ್ಚಿತ್ತಾರ್ಥ ಸ್ವರ್ಣವನ್ನಿಟ್ಟು ( ಪ್ರಾಚೀ ) ಅಸ್ಥಿಸಂಚಯನಶ್ರಾದ್ಧವನ್ನು ಮಾಡಲು ಬ್ರಾಹ್ಮಣರಿಂದ ಅಧಿಕಾರವನ್ನು ಪಡೆದು ] ತೂಷೀಯಲ್ಲಿ ತಿಲೋದಕಕೊಟ್ಟು ಮಂಡಲವನ್ನು ಮಾಡಿ, ದಕ್ಷಿಣಾಗ್ರವಾಗಿ ಒಂದು ಕೂರ್ಚವನ್ನಿಟ್ಟು ... .... ಗೋತ್ರ ........ ಪ್ರೇತ ಅಸ್ಥಿಸಂಚಯನಶ್ರಾದ್ಧೇ ಽ ಯಂ ತೇ ಕ್ಷಣ ಉಪತಿಷ್ಠತಾಂ ।

ಎಂದು ಆ ಕೂರ್ಚಬ್ರಾಹ್ಮಣನಿಗೆ ಒಂದು ದರ್ಭೆಯನ್ನು ಕೊಟ್ಟು,

— — ಗೋತ್ರ — — ಪ್ರೇತ ಪಾದ್ಯಮುಪತಿಷ್ಠತಾಂ । ಎಂದು ಪಾದ್ಯವನ್ನೂ,

— — ಗೋತ್ರಸ್ಯ — — ಪ್ರೇತಸ್ಯ ಅಸ್ಥಿಸಂಚಯನ ಶ್ರಾದ್ಧೇ ಇದಮಾಸನಮುಪತಿಷ್ಠತಾಂ ॥

ಎಂದು ಆಸನವನ್ನೂ ........ ಗೋತ್ರ ... ... ಪ್ರೇತ ಆಚ್ಛಾದನಮುಪತ್ತಿಷ್ಠತಾಂ । ಎಂದು ಒಂದು ದರ್ಭೆಯನ್ನು ಕೂಡ ಕೊಡಬೇಕು. ಆಮೇಲೆ ನೆಲದಲ್ಲಿ ದಕ್ಷಿಣಾಗ್ರವಾಗಿ ಒಂದು ದರ್ಭೆಯಿಟ್ಟು ಅದರಲ್ಲಿ ಒಂದು ಅರ್ಘ್ಯಪಾತ್ರವನ್ನಿಟ್ಟು ಒಂದು ಪವಿತ್ರಕೂರ್ಚವನ್ನೂ, ನೀರನ್ನೂ, ಎಳ್ಳುಗಳನ್ನು ಕೂಡ ಅದರಲ್ಲಿ ಹಾಕಿ .... .. ಗೋತ್ರ ..... .. ಪ್ರೇತ ಅಸ್ಥಿಸಂಚಯನಶ್ರಾದ್ಧೇ ಇದಮರ್ಘ್ಯಂ ತವೋಪತಿಷ್ಠತಾಂ ॥

ಎಂದು ಆ ಕೂರ್ಚಬ್ರಾಹ್ಮಣನಿಗೆ ಆ ಪಾತ್ರದಿಂದ ಅರ್ಘ್ಯವನ್ನು ಕೊಟ್ಟು ಹೀಗೆಯೇ ಗೋತ್ರನಾಮಗಳೊಂದಿಗೆ ಗಂಧ, ತುಲಸೀಪತ್ರ, ಭೃಂಗರಾಜಪತ್ರಗಳನ್ನೂ ಕೊಡಬೇಕು. ಅನಂತರ ಅಕ್ಕಿಯನ್ನು ಯಾ ಅದರ ಕ್ರಯವನ್ನು ನೀರಿನಪಾತ್ರ ಮತ್ತು ದಕ್ಷಿಣೆಯೊಂದಿಗೆ ಕೊಡಲಿಕ್ಕಿರುವ ಮಂತ್ರ —

.... ... ಗೋತ್ರಾಯ ........ ಪ್ರೇತಾಯ ಸೂತಕಾಂತೇ ದಾಸ್ಯಮಾನಂ ಆಮಾನ್ನಂ ತನ್ನಿಷ್ಕ್ರಯಂ ವಾ ಸೋದಕುಂಭಂ ಸದಕ್ಷಿಣಮುಪತಿಷ್ಠತಾಂ ॥ ಎಂದು ಕೊಟ್ಟು,

ಅಸ್ಥಿಸಂಚಯನಶ್ರಾದ್ಧೇ ಪಿಂಡಪ್ರದಾನಂ ಕರಿಷ್ಯಾಮಿ ।

ಎಂದು ಸಂಕಲ್ಪಿಸಿ ನೆಲವನ್ನು ಪ್ರೋಕ್ಷಿಸಿ ದಕ್ಷಿಣಾಗ್ರವಾಗಿ ಒಂದು ದರ್ಭೆಯನ್ನಿಟ್ಟು ಸಕ್ತುಪಿಂಡವನ್ನು ಕೈಯಲ್ಲಿ ತೆಗೆದು,

.... ... ಗೋತ್ರಾಯ ........ ಪ್ರೇತಾಯ ಅಸ್ಥಿಸಂಚಯನಶ್ರಾದ್ಧೇ ಅಯಂ ಸಕ್ತುಪಿಂಡ ಉಪತಿಷ್ಠತಾಂ ।

ಎಂದು ಹೇಳಿ ಆ ದರ್ಭೆಯಲ್ಲಿಟ್ಟು,

ಪಿಂಡೋಪರಿ ತಿಲೋದಕಮುಪತಿಷ್ಠತಾಂ ॥

ಎಂದು ಪಿಂಡದಮೇಲೆ ತಿಲೋದಕಕೊಟ್ಟು, ಗಂಧ, ತುಳಸೀಪತ್ರ, ಭೃಂಗರಾಜಪತ್ರಗಳನ್ನು ಕೂಡ,

ಗಂಧಸ್ತುಳಸೀಪತ್ರಂ ಭೃಂಗರಾಜಪತ್ರಂ ಚೋಪತಿಷ್ಠತಾಂ ||

ಎಂದು ಪಿಂಡಕ್ಕೆ ಹಾಕಿ, ತಾಂಬೂಲ ದಕ್ಷಿಣೆಗಳನ್ನು ಕೊಡಲಿಕ್ಕಿರುವ ಮಂತ್ರ —

ಸೂತಕಾಂತೇ ದಾಸ್ಯಮಾನಂ ತಾಂಬೂಲಂ ದಕ್ಷಿಣಾ ಚೋಪತಿಷ್ಠತಾಂ ||

ಎಂದು ಕೊಟ್ಟು, ತೂಷ್ಣೀಯಲ್ಲಿ ಸಕ್ತುಶೇಷದಿಂದ ವಿಕಿರವನ್ನು ಮಾಡಿ, ಅನಾದಿನಿಧನೋ ...... ಭವ || ಎಂದು ನಮಸ್ಕಾರದೊಂದಿಗೆ ಪ್ರಾರ್ಥಿಸಿ, "ಅಭಿರಮ್ಯತಾಂ" ಎಂದು ಹೇಳಿ ಆಚಾರ್ಯನಿಂದ "ಅಭಿರತಾಃ ಸ್ಮಃ" ಎಂಬ ಉತ್ತರವನ್ನು ಪಡೆದು ಪಿಂಡವನ್ನುದ್ವಾಸಿಸಿ ನಮಸ್ಕರಿಸಿ ಬೇರೆಕಡೆಗೆ ಹೋಗಿ ಸ್ನಾನವನ್ನು ಮಾಡಬೇಕು.

ಹೀಗೆ ಅಸ್ಥಿಸಂಚಯನದ ಕ್ರಮವು.

## — ಅಸ್ಥಿಯಿಲ್ಲದಿದ್ದರೆ ಸಂಚಯನದ ಕ್ರಮವು —

ನೀರಿನ ಪ್ರವಾಹದಿಂದ, ಯಾ ಪ್ರತಿಕೃತಿದಾಹದಿಂದ, ಅಥವಾ ಬೇರೆ ಯಾವ ಕಾರಣದಿಂದಲಾದರೂ ದಹನಮಾಡಿದ ಸ್ಥಳದಲ್ಲಿ ಅಸ್ಥಿಗಳಿಲ್ಲದಿದ್ದರೆ ಕರ್ತ್ರಾದಿಗಳು, ಮೃತನ ಅಸ್ಥಿಗಳು ಎಷ್ಟಾಗುತ್ತವೋ ಅಷ್ಟೇ ಆ ದಹನದೇಶದ ಮಣ್ಣನ್ನು ಯಾ ಭಸ್ಮವನ್ನು ಕ್ರಮಪ್ರಕಾರ ಸಂಚಯನ ಮಾಡಬೇಕೆಂದು ಶಾಸ್ತ್ರವಚನವು ತಿಳಿಸುತ್ತಿದೆ.



## — ಹತ್ತನೇದಿನ ಮಾಡಬೇಕಾದ ಕ್ರಮವು —

ಕರ್ತೃವು ಹತ್ತನೇದಿನ ಬೆಳಿಗ್ಗೆ ಎದ್ದು ತಿಲಾಂಜಲಿ, ನಿತ್ಯಬಲಿಶ್ರಾದ್ಧ ಮೊದಲಾದ ನಿತ್ಯವಿಧಿಗಳನ್ನು ತೀರಿಸಿ ಪಿಂಡಕ್ಕೆ ನೈವೇದ್ಯವನ್ನು ಬೇಯಿಸಿ ನಿತ್ಯ ಬಲಿಶ್ರಾದ್ಧ ಮಾಡುವ ಸ್ಥಳದಲ್ಲಿ ಯಾ ಬೇರೆಕಡೆಯಲ್ಲಿ ಮಣ್ಣಿನಿಂದ ತ್ರಿಕೋಣಾ ಕಾರದ ವೇದಿಕೆಯನ್ನುಮಾಡಿ ಗೋಮಯದಿಂದಶುದ್ಧವಾಡಿ ಅರಸಿನಹುಡಿವೊದ ಲಾದವುಗಳಿಂದಲಂಕರಿಸಿ (ಉಪ) ಆಚಮನ ಮತ್ತು ತೂಷ್ಣೀಯಲ್ಲಿ ಪ್ರಾಣಾ ಯಾಮವನ್ನೂ ಮಾಡಿ,

ಸ್ವಸ್ತಿ ಶ್ರೀಮ ........ ಸಿಧ್ಯರ್ಥಂ (ಪ್ರಾಚೀ) ........ ಗೋತ್ರಸ್ಯ ........ ಪ್ರೇತಸ್ಯ ಪ್ರೇತತ್ವನಿವೃತ್ತ್ಯರ್ಥಂ ದಶಮದಿನವಿಧಿಂ ಕರಿಷ್ಯಾಮಿ ।

ಎಂದು ಸಂಕಲ್ಪಿಸಿ ವೇದಿಕೆಯ ನಡುವಿನಲ್ಲಿಯೂ ಮತ್ತು ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿಯೂ ಒಂದೊಂದು ದರ್ಭೆ ಯನ್ನು ದಕ್ಷಿಣಾಗ್ರವಾಗಿಟ್ಟು ನಡುವಿನ ದರ್ಭೆಯಲ್ಲಿ ದೊಡ್ಡದಾದ ಒಂದು ಪಿಂಡ ವನ್ನೂ, ನೀರುತುಂಬಿದ ಒಂದು ಕುಂಭವನ್ನೂ ಇಡಲಿಕ್ಕಿರುವ ಮಂತ್ರ —

.... ... ಗೋತ್ರಾಯ ........ ಪ್ರೇತಾಯ ಕ್ಷುತ್ಪಿಪಾಸಾನಿವೃತ್ತ್ಯರ್ಥಮಯಂ ಪಿಂಡಸ್ತೋದಕುಂಭ ಉಪತಿಷ್ಠತಾಂ ॥

ಎಂದಿಟ್ಟು ಆದರಿಂದ ಪೂರ್ವದಿಕ್ಕಿನ ದರ್ಭೆಯಲ್ಲಿ ಹೀಗೆಯೇ ಒಂದು ಪಿಂಡವನ್ನೂ, ನೀರು ತುಂಬಿದ ಪಾತ್ರವನ್ನೂ ಇಡಲಿಕ್ಕಿರುವ ಮಂತ್ರ —

ಪ್ರೇತಸಖಿಭ್ಯಃ ಕ್ಷುತ್ಪಿಪಾಸಾನಿವೃತ್ತ್ಯರ್ಥಮಯಂ ।
ಪಿಂಡಸ್ತೋದಕುಂಭ ಉಪತಿಷ್ಠತಾಂ ॥

ಎಂದಿಟ್ಟನಂತರ ದಕ್ಷಿಣದಿಕ್ಕಿನಲ್ಲಿರುವ ದರ್ಭೆಯಲ್ಲಿ ಇದೇ ಕ್ರಮದಲ್ಲಿ ಪಿಂಡೋದಕುಂಭಗಳನ್ನಿಡಲಿಕ್ಕಿರುವ ಮಂತ್ರ —

ವೈವಸ್ವತಾಯ ಯಮಾಯ ಕ್ಷುತ್ಪಿಪಾಸಾನಿವೃತ್ತ್ಯರ್ಥಮಯಂ
ಪಿಂಡಸ್ತೋದಕುಂಭ ಉಪತಿಷ್ಠತಾಂ ॥

ಎಂದಿಟ್ಟು ಹೀಗೆಯೇ ಪಡುದಿಕ್ಕಿನಲ್ಲಿರುವ ದರ್ಭೆಯಲ್ಲಿ ಪಿಂಡೋದ ಕುಂಭಗಳನ್ನಿಡಲಿಕ್ಕಿರುವ ಮಂತ್ರ —

ಒಟ್ಟಿಗೇನೆ ಮುಳುಗಿ ಸ್ನಾನ, ಆಚಮನಗಳನ್ನು ಮಾಡಿ ಮೌನಿಗಳಾಗಿ ಎತ್ತು, ದನ, ಸುವರ್ಣಗಳನ್ನು ಹಿಡಿಯುವುದರಿಂದ ಹಸ್ತಶುದ್ಧಿಯನ್ನು ಮಾಡಿ ಬಿಳಿ ಮಡಿಬಟ್ಟೆಯ (ದಳಿಯ ವಸ್ತ್ರವ)ನ್ನುಟ್ಟು ಮನೆಗೆ ಹೋಗಿ ಎಲ್ಲರೂ ಅಲ್ಲಿಯೇ ಭೋಜನವನ್ನು ಮಾಡಬೇಕು.

## ಹೀಗೆ ದಶಮದಿನದ ವಿಧಿಯು

---

### ಪುನರ್ದಾಹ ವಿಚಾರ—

ವಿಧಿವತ್ ದಹನಸಂಸ್ಕಾರಗಳನ್ನು ಮಾಡಿದ್ದರೂ ಹತ್ತು ದಿನಗಳೊಳಗೆ ಪ್ರಬಲವಾದ ಕಾರಣಾಂತರಗಳಿಂದ ಅಸ್ಥಿ ಸಂಚಯನವು ಉಳಿದು ಹೋಗಿದ್ದರೆ ಆ ಅಸ್ಥಿಗಳನ್ನು ತಂದು ಪುನರ್ದಹನಮಾಡಿ ತಿಲಾಂಜಲ್ಯಾದಿ ಎಲ್ಲಾ ಕ್ರಿಯೆಗಳನ್ನು ಮಾಡಬೇಕು ಅಸ್ಥಿ ಸಂಚಯನವನ್ನು ಮಾಡಿ ತಿಲಾಂಜಲ್ಯಾದಿಗಳು ಉಳಿದುಹೋಗಿದ್ದರೆ ಅವುಗಳನ್ನು ಮಾತ್ರ ಮಾಡಬೇಕು. ಅಲ್ಲದೆ ಪುನರ್ದಹನವು ಅನಗತ್ಯ.

ದಹನಕಾಲದಲ್ಲಿ ಕರ್ತ್ರಾದಿಗಳ ಅಜಾಗ್ರತೆಯಿಂದ ಶವದ ಯಾವ ಅವಯವವಾದರೂ ಕಾಷ್ಠದಿಂದ ಜಾರಿಬಿದ್ದು ಯಾ ಅನ್ಯರೀತಿಯಲ್ಲಿ ದಹನವಾಗದೆ ಉಳಿದುಹೋಗಿದ್ದರೆ ಪುನರ್ದಹನವು ಅಗತ್ಯ. ಹೀಗೆ ಗೃಹ್ಯಾಗ್ನಿಯಿಂದ ಯಾ ಬೇರೆ ಅಗ್ನಿಯಿಂದ ಅಮಂತ್ರಕವಾಗಿ ದಹನ ಮಾಡಲ್ಪಟ್ಟವರಿಗೂ, ಚಂಡಾಲ ಎತ್ತು, ಹುಲಿ, ಹಂದಿ ಮೊದಲಾದವುಗಳಿಂದ ಕೊಲ್ಲಲ್ಪಟ್ಟವರಿಗೂ, ಆತ್ಮಹತ್ಯೆಮಾಡಿಕೊಂಡವರಿಗೂ ಪುನರ್ದಹನವು ಅಗತ್ಯವಾಗಿದೆಯೆಂದು ಸ್ಮೃತಿಸಿದ್ಧಾಂತ.

### ಪುನರ್ದಾಹಾಶೌಚ ವಿಚಾರ—

ಪುನರ್ದಹನವು ಆಹಿತಾಗ್ನಿಯದ್ದಾಗಿದ್ದರೆ ಸಪಿಂಡರಿಗೆ ಹತ್ತು ದಿನವೂ. ಅನಾಹಿತಾಗ್ನಿಯದ್ದಾಗಿದ್ದರೆ ಮೂರು ದಿನವೂ, ಮಾತಾಪಿತೃಗಳದ್ದಾಗಿದ್ದರೆ ಮಕ್ಕಳಿಗೆ ಹತ್ತುದಿನವೂ ತನ್ನಿಮಿತ್ತ ಆಶೌಚವಿದೆಯೆಂದು ಶಾಸ್ತ್ರ ವಚನಗಳ ಸ್ವಾರಸ್ಯ.

## ದ್ವಿಚಂದ್ರ-ದ್ವಿಸೂರ್ಯದರ್ಶನದೋಷವಿಚಾರ—

ಮೃತಿದಿನದಿಂದ ಹತ್ತು ದಿನಗಳ ಮಧ್ಯದಲ್ಲಿ ಅಮಾವಾಸ್ಯೆಯು ಸಂಭವಿಸಿದರೆ, ದ್ವಿಚಂದ್ರದರ್ಶನದೋಷವಾಗುವುದು. ಹೀಗೆಯೇ ಸಂಕ್ರಮಣವು ಪ್ರಾಪ್ತವಾದರೆ ದ್ವಿಸೂರ್ಯದರ್ಶನದೋಷವಾಗುವುದು. ಈ ಅಮಾವಾಸ್ಯೆ ಮತ್ತು ಸಂಕ್ರಮಣದೋಷಗಳು, ಮಾತಾಪಿತೃಗಳ ದಶಾಹಕ್ರಿಯೆಗಳನ್ನು ಮಾಡಲು ಔರಸ, ದತ್ತ, ಪುತ್ರಿಕಾಪುತ್ರರಿಗೆ ಎಂದೂ ಬಾಧಕಗಳಾಗುವುದಿಲ್ಲ.

ಉಳಿದ ಪುತ್ರರಿಗಾದರೆ, ಮೂರು ದಿನಗಳೊಳಗೆ ಮೇಲಿನ ಎರಡು ದೋಷಗಳು ಸಂಭವಿಸಿದರೆ ಮಾತ್ರ ಅವುಗಳು ಬಾಧಕಗಳಾಗುವುದಿಲ್ಲ. ಅದರಿಂದ ಮೇಲೆ ದಶಾಹಮಧ್ಯದಲ್ಲಿ ಪ್ರಾಪ್ತವಾದರೆ ಆ ದೋಷದ ನಿಮಿತ್ತ ಮುಂದೆ ಹೇಳುವ ರೀತಿಯಲ್ಲಿ ಕ್ರಿಯಾಸಮಾಪ್ತಿಯನ್ನು ಮಾಡಬೇಕು.

ಮೇಲೆ ಹೇಳಿದ ಕರ್ತೃವಿಶೇಷಗಳನ್ನು ಬಿಟ್ಟು ಉಳಿದ ಎಲ್ಲಾ ಕರ್ತೃಗಳಿಗಾದರೂ ಮೃತಿದಿನಮೊದಲ್ಗೊಂಡು ದಶಾಹಮಧ್ಯದಲ್ಲಿ ಯಾವ ದಿನಗಳಲ್ಲಾದರೂ ಆ ಎರಡು ದೋಷಗಳು ಒಟ್ಟಿಗೆ ಯಾ ಬೇರೆ ಬೇರೆಯಾಗಿ ಬಂದರೆ ಅಮಾವಾಸ್ಯೆಯ ದಿನವೇ ಯಾ ಸಂಕ್ರಮಣದ ದಿನವೇ ಮಿಕ್ಕುಳಿದ ದಶಾಹಶಿಷ್ಟದಿನಗಳ ತಿಲಾಂಜಲಿ, ನಿತ್ಯಪಿಂಡ, ವಾಯಸಬಲ್ಯಾದಿಗಳನ್ನು ಅಪಕರ್ಷಣೆ ಮಾಡಿ ಸಮಾಪ್ತಿ ಮಾಡಬೇಕು ಅಮಾವಾಸ್ಯೆ ಮತ್ತು ಸಂಕ್ರಮಣ, ಇವೆರಡು ದಶಾಹಮಧ್ಯದಲ್ಲಿ ಹಿಂದು ಮುಂದಾಗಿ ಹೇಗೆ ಬಂದರೂ ಅಮಾವಾಸ್ಯೆಯದಿನವೇ ಕ್ರಿಯೆಗಳನ್ನು ಮುಗಿಸಿ ಮತ್ತೆ ಪ್ರತಿದಿನವೂ ಸ್ನಾನವನ್ನು ಮಾತ್ರ ಮಾಡುತ್ತಾ ಬಂದು ದಶಮದಿನ ವಿಧಿಯನ್ನು ಹತ್ತನೇ ದಿನವೇ ಮಾಡಿ ಮೊದಲು ಶತಾಂಜಲಿಕೊಟ್ಟು ಆ ಪ್ರೇತಶಿಲೆಯನ್ನು ಕೂಡ ಹತ್ತನೇ ದಿನವೇ ಉದ್ವಾಸಿಸಬೇಕು.

# ಉಪಸಂಹಾರ

ಪ್ರಿಯ ಆಸ್ತಿಕ ಮಹಾಶಯರೇ !

ಹೀಗೆ ಕ್ರಮಪ್ರಕಾರ ದಶಾಹಕ್ರಿಯೆಗಳನ್ನು ನೆರವೇರಿಸಿ ಅವರವರ ಕುಲಪುರೋಹಿತರನ್ನು ಆಮಂತ್ರಿಸಿ ಹನ್ನೊಂದನೇ ಮೊದಲಾದ ದಿನಗಳಲ್ಲಿ ಸ್ವಶಾಖೋಕ್ತವಿಧಿಯಿಂದ ವೃಷೋತ್ಸರ್ಗ, ಮಹೈಕೋದ್ದಿಷ್ಟ, ಷೋಡಶ ಮಾಸಿಕಶ್ರಾದ್ಧ ಮೊದಲಾದ ಕ್ರಿಯೆಗಳನ್ನು ಮಾಡಿದರೆ ಮಾತ್ರ ಮಗನು ನಿಜವಾದ ಪುತ್ರನಾಗುತ್ತಾನೆ. ತಂದೆಯು ಕೂಡ ಪ್ರೇತತ್ವದಿಂದ ವಿಮುಕ್ತನಾಗಿ ನರಕದ ಭಯವು ಸ್ವಲ್ಪವೂ ಇಲ್ಲದೆ ಪಿತೃಗಣದೊಟ್ಟಗೆ ಪರಮಾನಂದದಿಂದಿರುತ್ತಾನೆ. ಆವನ ಅನುಗ್ರಹದಿಂದಲೇ ಇಲ್ಲಿ ಕರ್ತೃವಿನ ಕುಟುಂಬವು ಉತ್ತರೋತ್ತರ ಶ್ರೇಯಸ್ಸನ್ನು ಹೊಂದಿ ಅಭಿವೃದ್ಧಿಯಾಗುತ್ತದೆ. ಈ ಕಾರಣದಿಂದ ಪ್ರತಿಯೊಬ್ಬನೂ ತನ್ನ ಪಿತ್ರಾದಿಗಳು ಸಂಪರೇತರಾಗಿರುವಾಗ ಈ ದಶಾಹಾದಿಕ್ರಿಯೆಗಳನ್ನು ಅವಶ್ಯವಾಗಿ ಮಾಡಲೇಬೇಕು. ಇಲ್ಲದಿದ್ದರೆ ಮಕ್ಕಳು ಕರ್ತವ್ಯಭ್ರಷ್ಟರಾಗಿ ಮಕ್ಕಳಿಗೆ ತಂದೆಯಿದ್ದರೂ ತಂದೆಗೆ ಮಕ್ಕಳಿಲ್ಲದ ಫಲವಾದ್ದರಿಂದ "ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೋ ನೈವ ಚ ನೈವ ಚ" ಎಂಬಂತೆ ತಂದೆಯು ನಿರ್ಗತಿಕನಾಗಿರುವುದರಿಂದ ಮಕ್ಕಳು ಪಿತೃಶಾಪಕ್ಕೆ ಪಾತ್ರರಾಗುವರು. ಅಲ್ಲದೆ ಕಾಲಕ್ರಮೇಣ ಆ ವಂಶವೇ ನಿರ್ಮೂಲವಾಗುವುದೆಂದು ಶಾಸ್ತ್ರಪುರಾಣಾದಿಗಳ ಒಕ್ಕೊರಲಿನ ಉದ್ಘೋಷಣೆ. ಆದ್ದರಿಂದ ಈ ಉತ್ತರಕ್ರಿಯೆಯು ಅನಿವಾರ್ಯವಾದದ್ದೆಂಬುದು ಸಿದ್ಧ, ಈ ವಿಷಯದಲ್ಲಿ ಕರ್ಮಠರಿಗೆ ನನ್ನನ್ನು ಈ ರೀತಿಯಲ್ಲಿ ಸಹಾಯಮಾಡಲು ಪ್ರೇರೇಪಿಸಿದ ಸರ್ವಾಂತರ್ಯಾಮಿಯಾದ ಚಿನ್ಮಯನಾದ ಆ ಮಾಧವನಿಗೆ ಈ ಮೊದಲ ಕಾಣಿಕೆಯನ್ನರ್ಪಿಸಿ ನಮಸ್ಕರಿಸುವೆನು.

**"ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಂ |**
**ಯೇ ನಮಸ್ಯಂತಿ ಗೋವಿಂದಂ ನ ತೇಷಾಂ**
**ವಿದ್ಯತೇ ಭಯಂ" ||**

ಓಂ ತತ್ ಸತ್

# ದಹನ ದೇಶಕ್ಕೆ ಕೊಂಡು ಹೋಗಬೇಕಾದ ಸಾಮಾನುಗಳ ವಿವರಣೆ.

| ಕ್ರಮ ಸಂಖ್ಯೆ | | |
|---|---|---|
| 1 | ಕರ್ತೃವಿಗೆ ಮಣ್ಣಿನ ಜಲಪಾತ್ರ | 1 |
| 2 | ಎಳ್ಳು ಸೇರು | 1 |
| 3 | ಮುಷ್ಟಿದರ್ಭೆಗಳ ಕಟ್ಟು | 15 |
| 4 | ಅಕ್ಷತೆ, ಗಂಧ, ತುಳಸಿ, | |
| 5 | ಏಳು ಸಕ್ತು ಪಿಂಡಗಳಿಗೆ ಬೇಕಾದ ಸಕ್ತುಗಳು | |
| 6 | ಅವುಗಳ ಅಭಿಘಾರಕ್ಕೆ ದಧ್ಯಾಜ್ಯಗಳು | |
| 7 | ಮೂರು ಪ್ರಾಯಶ್ಚಿತ್ತಕ್ಕೆ ಬೇಕಾದ ಹಿರಣ್ಯಗಳು | |
| 8 | ಹೊಂಡವನ್ನು ತೋಡಲು ಸಮಿಧೆಕೋಲು | 1 |
| 9 | ಶೈವಾಲ (ಹಾವಸೆ) | |
| 10 | ಶಮಿಯ ಶಾಖೆಯು | 1 |
| 11 | ಉಲ್ಲೇಖಿಸಿದ ರೇಖೆಗೆ ಹಾಕಲು ಚಿನ್ನದ ತುಂಡುಗಳು | 3 |
| 12 | ಗಂಧದ ಕೊರಡು | |
| 13 | ಕೃಷ್ಣಾಜಿನ (ಆಹಿತಾಗ್ನಿಯಾಗಿದ್ದರೆ) | |
| 14 | ಹಿರಣ್ಯ ಶಕಲಗಳು (ಶಕ್ತಿಯಿದ್ದರೆ) | 7 |
| 15 | ಅತ್ತಿಕೋಲು | 2 |
| 16 | ಚಮಸಾದಿಪಾತ್ರಗಳಿಗೆ ಜುಮ್ಮ ದೊನ್ನೆಗಳು | 3 |
| 17 | ಅತ್ತಿಎಲೆಯ ಸ್ರುಕ್‌ಸ್ರುವ | |
| 18 | ತುಪ್ಪ ಕುಡ್ತೆ | 1 |

## —ಪ್ರೇತಪುನಸ್ಸಂಧಾನವಿದ್ದರೆ—

| | | |
|---|---|---|
| 1 | ಒಂದು ಪ್ರಾಯಶ್ಚಿತ್ತಕ್ಕೆ ಸುವರ್ಣ | |
| 2 | ದೊನ್ನೆ | 1 |
| 3 | ತುಪ್ಪ ಕುಡ್ತೆ | ¼ |

## — ಪಂಚಕಾದಿ ದೋಷವಿದ್ದರೆ—

ಕ್ರಮ ಸಂಖ್ಯೆ

| | | |
|---|---|---|
| 1 | ಒಂದು ಪ್ರಾಯಶ್ಚಿತ್ತಕ್ಕೆ ಸುವರ್ಣ | |
| 2 | ದರ್ಭೆಯಿಂದ ಮಾಡಿದ ಮನುಷ್ಯನ ಪ್ರತಿಮೆಗಳು | 5 |
| 3 | ಅದಕ್ಕೆ ಲೇಪಿಸಲು ಯವಪಿಷ್ಟ | |
| 4 | ಸುತ್ತಲು ಪಟ್ಟೆನೂಲು | |
| 5 | (ಶಕ್ತಿಯಿದ್ದರೆ) ಪಂಚರತ್ನ, ಯಾ ಚಿನ್ನ | |
| 6 | ತುಪ್ಪ ಕುಡ್ತೆ | ¼ |

## —ತ್ರಿಪಾದನಕ್ಷತ್ರವೃತಿ ವಿಧಿಗೆ—

| | | |
|---|---|---|
| 1 | ಒಂದು ಪ್ರಾಯಶ್ಚಿತ್ತಕ್ಕೆ ಸುವರ್ಣ | 3 |
| 2 | ದರ್ಭೆಯ ಮನುಷ್ಯನ ಪ್ರತಿಮೆಗಳು | 3 |
| 3 | ತುಪ್ಪ ಕುಡ್ತೆ | ½ |
| 4 | ಯವಪಿಷ್ಟ | |
| 5 | ಪಟ್ಟೆನೂಲು | |

## — ತ್ರಿಪುಷ್ಕರ ವಿಧಿಗೆ—

| | | |
|---|---|---|
| 1 | ಒಂದು ಕೃಚ್ಛ್ರತ್ರಯಾತ್ಮಕ ಪ್ರಾಯಶ್ಚಿತ್ತಕ್ಕೆ ಹಿರಣ್ಯ | |
| 2 | ಮೊದಲಿನಂತಿರುವ ಪ್ರತಿಮೆಗಳು | 3 |
| 3 | ಯವಪಿಷ್ಟ | |
| 4 | ಪಟ್ಟೆನೂಲು | |
| 5 | ತುಪ್ಪ ಕುಡ್ತೆ | ¼ |

## —ದ್ವಿಪುಷ್ಕರ ವಿಧಿಗೆ—

| | | |
|---|---|---|
| 1 | ಒಂದು ಪ್ರಾಯಶ್ಚಿತ್ತಕ್ಕೆ ಸುವರ್ಣ | |
| 2 | ಮೊದಲಿನಂತಿರುವ ಪ್ರತಿಮೆಗಳು | 2 |
| 3 | ಪಟ್ಟೆನೂಲು | |
| 4 | ಯವಪಿಷ್ಟ | |
| 5 | ತುಪ್ಪ ಕುಡ್ತೆ | ¼ |

# ದಹನಾನಂತರ ಸಚೇಲಸ್ನಾನಮಾಡಿ ಬರುವಾಗ ಮನೆಯ ಜಗಲಿಯಲ್ಲಿ ತಯಾರಿಸಬೇಕಾದ ಸಾಮಾನುಗಳು.

ಕ್ರಮ ಸಂಖ್ಯೆ

19 ಕಹಿಬೇವಿನ ಸೊಪ್ಪುಗಳು

20 ಕಲ್ಲು

21 ಬೆಂಕಿ

22 ಗೋಮಯ

23 ಅಕ್ಷತೆ

24 ಎಳ್ಳು

25 ನೀರು

26 ದೂರ್ವೆ (ಗರುಕೆ ಹುಲ್ಲು)

27 ವೃಷಭ (ಎತ್ತು)

28 ಸಾಸಿವೆ

29 ಪ್ರಾಶನಕ್ಕೆ ತುಪ್ಪ

30 ಬ್ರಾಹ್ಮಣರಿಗೆ ಕೊಡಲು ಸೀಯಾಳ, ದಕ್ಷಿಣೆಗಳು ಬೇಕಾದಷ್ಟು



# ಅಸ್ಥಿಸಂಚಯನದೇಶಕ್ಕೆ ಕೊಂಡುಹೋಗಬೇಕಾದ ಸಾಮಾನುಗಳು

## ಶ್ಮಶಾನಾಗ್ನಿಯು ನಾಶವಾಗಿದ್ದರೆ ಪ್ರಾಯಶ್ಚಿತ್ತಕ್ಕೆ

| ಕ್ರಮಸಂಖ್ಯೆ | | |
|---|---|---|
| 1 | ಸಮಿಧೆಯ ಕೋಲು | 1 |
| 2 | ಗೋಮಯ | |
| 3 | ದರ್ಭೆಯ ಕಟ್ಟು | 2 |
| 4 | ಆಜ್ಯಪಾತ್ರಕ್ಕೆ ದೊನ್ನೆ | 1 |
| 5 | ಸ್ರುಕ್, ಸ್ರುವ | |
| 6 | ಲೌಕಿಕಾಗ್ನಿ | |
| 7 | ತುಪ್ಪ ಕುಡ್ತೆ | 1 |

— ಅಸ್ಥಿಸಂಚಯನಕ್ಕೆ—

| | | |
|---|---|---|
| 1 | ಪಂಚಗವ್ಯ | |
| 2 | ಶಾಲಗ್ರಾಮತೀರ್ಥ | |
| 3 | ತುಳಸೀ ತೀರ್ಥ | |
| 4 | ಮೂರು ಪ್ರಾಯಶ್ಚಿತ್ತಕ್ಕೆ ಬೇಕಾದ ಸುವರ್ಣಗಳು | |
| 5 | ಶಮೀಶಾಖೆ | 1 |
| 6 | ಹಾಲು | |
| 7 | ಹೊಸಮುಚ್ಚಳದೊಂದಿಗೆ ಹೊಸ ಮಣ್ಣಿನ ಪಾತ್ರೆ | 1 |
| 8 | ಗೆರಸೆ | 1 |
| 9 | ಹಾರೆ | |
| 10 | ಗೋಮಯ | |
| 11 | ಅರಸಿನಪುಡಿ | |
| 12 | ಎಳ್ಳು ಕುಡ್ತೆ | $\frac{3}{4}$ |
| 13 | ದರ್ಭೆಕಟ್ಟು | 5 |
| 14 | ಐದು ಪಿಂಡಗಳಿಗೆ ಬೇಕಾದ ಸಕ್ತು ಯಾ ಅಕ್ಕಿಪುಡಿ | |

| ಕ್ರಮಸಂಖ್ಯೆ | | |
|---|---|---|
| 15 | ಉದಕುಂಭಕ್ಕೆ ಹೊಸ ಮಣ್ಣಿನ ಪಾತ್ರೆಗಳು ಯಾ ಸೀಯಾಳ ಅಥವಾ ದೊನ್ನೆಗಳು | 4 |
| 16 | ಪಾದುಕೆಗಳು | 8 |
| 17 | ಕೂರ್ಚಗಳು | 2 |
| 18 | ಅರ್ಘ್ಯ ಪಾತ್ರಕ್ಕೆ ದೊನ್ನೆ | 1 |
| 19 | ಛತ್ರಗಳು | 4 |
| 20 | ನಾಲ್ಕು ಹೋಳಿಗೆಗೆ ಬೇಕಾದ ಯವಪಿಷ್ಟ | |
| 21 | ತುಳಸೀ | |
| 22 | ಭೃಂಗರಾಜ ಪತ್ರ | |
| 23 | ದಾನಕ್ಕೆ ಅಕ್ಕಿ ಯಾ ಅದರ ಮೌಲ್ಯ, ನೀರಿನಪಾತ್ರೆ, ದಕ್ಷಿಣೆ | |
| 24 | ಅನ್ನ ಶುದ್ಧಿಗೆ ತುಪ್ಪ | |
| 25 | ಪಿಂಡಕ್ಕೆ ಬಾಳೆಹಣ್ಣು | |
| 26 | ಬೆಲ್ಲ | |
| 27 | ತಾಂಬೂಲ ದಕ್ಷಿಣೆ | |

---

" ಶಂ ನೋ ಅಸ್ತು ದ್ವಿಪದೇ ಶಂ ಚತುಷ್ಪದೇ "

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ



ವಾಯಸೇಭ್ಯಃ ಕ್ಷುತ್ಪಿಪಾಸಾನಿವೃತ್ತ್ಯರ್ಥಮಯಂ ಪಿಂಡಸ್ಸೋದ
ಕುಂಭ ಉಪತಿಷ್ಠತಾಂ ||

ಎಂದಿಟ್ಟು ಉತ್ತರದಿಕ್ಕಿನಲ್ಲಿರುವ ದರ್ಭೆಯಲ್ಲಿಯೂ ಇದೇ ಸಂಖ್ಯೆಯಲ್ಲಿ ಪಿಂಡೋದಕುಂಭಗಳನ್ನಿಡಲು ಮಂತ್ರ—

ಪ್ರೇತಾಧಿಪತಯೇ ರುದ್ರಾಯ ಕ್ಷುತ್ಪಿಪಾಸಾನಿವೃತ್ತ್ಯರ್ಥಮಯಂ
ಪಿಂಡಸ್ಸೋದಕುಂಭ ಉಪತಿಷ್ಠತಾಂ |

ಎಂದು ಹೇಳಿ ಇಡಬೇಕು. ಅನಂತರ ಈ ಪಿಂಡೋದಕುಂಭಗಳನ್ನಿಟ್ಟ ಕ್ರಮದಲ್ಲೇ ಅವುಗಳ ಮೇಲೆ ಮಂತ್ರಾನುಸಾರ ಒಂದೊಂದುಸಲ ತಿಲೋದಕ ಕೊಡಲಿಕ್ಕಿರುವ ಮಂತ್ರ—

........ಗೋತ್ರ ... ...ಪ್ರೇತೇದಂ ತೇ ಪಿಂಡೋಪರಿ ತಿಲೋದಕ
ಮುಪತಿಷ್ಠತಾಂ||
ಪ್ರೇತಸಖಿಭ್ಯಃ ಪಿಂಡೋಪರಿ ತಿಲೋದಕಮುಪತಿಷ್ಠತಾಂ ||
ವೈವಸ್ವತಾಯ ಯಮಾಯ ಪಿಂಡೋಪರಿ ತಿಲೋದಕಮುಪ
ತಿಷ್ಠತಾಂ ||

ವಾಯಸೇಭ್ಯಃ ಪಿಂಡೋಪರಿ ತಿಲೋದಕಮುಪತಿಷ್ಠತಾಂ |
ಪ್ರೇತಾಧಿಪತಯೇ ರುದ್ರಾಯ ಪಿಂಡೋಪರಿ ತಿಲೋದಕ
ಮುಪತಿಷ್ಠತಾಂ ||

ಹೀಗೆ ತಿಲೋದಕಕೊಟ್ಟನಂತರ ಈ ಎಲ್ಲಾ ದೇವತೆಗಳಿಗೂ, ಎರಡೆರಡು ಪಾದುಕೆ, ಒಂದೊಂದು ಛತ್ರ. ಒಂದೊಂದು ಪತಾಕೆ, ಸಕ್ತುಪಿಷ್ಟದಿಂದ ಮಾಡಿದ ಒಂದೊಂದು ಹೋಳಿಗೆ. ಈ ಸಂಖ್ಯೆಯಲ್ಲಿ ಇವುಗಳನ್ನು ಮುಂದೆ ಹೇಳುವ ಆಯಾ ದೇವತೆಗಳಿಗೆ ಆಯಾ ಮಂತ್ರದಿಂದ ವೇದಿಕೆಯ ಮೇಲೆ ಇಡಬೇಕು—

.... ...ಗೋತ್ರಾಯ ... ...ಪ್ರೇತಾಯ ಪಾದುಕಾದ್ವಯಂ ಛತ್ರಂ
ಪತಾಕಾ ಪೋಲಿಕಾ ಚೋಪತಿಷ್ಠತಾಂ ||
ಪ್ರೇತಸಖಿಭ್ಯಃ ಪಾದುಕಾದ್ವಯಂ ಛತ್ರಂ ಪತಾಕಾ ಪೋಲಿಕಾ
ಚೋಪತಿಷ್ಠತಾಂ ||
ವೈವಸ್ವತಾಯ ಯಮಾಯ ಪಾದುಕಾದ್ವಯಂ ಛತ್ರಂ ಪತಾಕಾ

ಪೋಲಿಕಾ ಚೋಪತಿಷ್ಠತಾಂ ||

ವಾಯನೇಭ್ಯಃ ಪಾದುಕಾದ್ವಯಂ ಛತ್ರಂ ಪತಾಕಾ ಪೋಲಿಕಾ ಚೋಪತಿಷ್ಠತಾಂ ||

ಪ್ರೇತಾಧಿಪತಯೇ ರುದ್ರಾಯ ಪಾದುಕಾದ್ವಯಂ ಛತ್ರಂ ಪತಾಕಾ ಪೋಲಿಕಾ ಚೋಪತಿಷ್ಠತಾಂ ||

ಎಂದಿಟ್ಟು, ಅನಾದಿನಿದನೋ .............ಭವ || ಎಂದು ಹೇಳಿ ಬ್ರಹ್ಮಾರ್ಪಣವನ್ನು ಮಾಡಿ ಪಡುದಿಕ್ಕಿನಲ್ಲಿರುವ ಪಿಂಡವನ್ನು ವಾಯಸಗಳಿಗೆ ಕೊಟ್ಟು ಅವು ತಿನ್ನುವ ವರೆಗೆ ಅಲ್ಲೇನಿಂತು, ಅನಂತರ ಮೊದಲು ಸ್ಥಾಪಿಸಿದ ಪ್ರೇತಶಿಲೆಯ ಹತ್ತಿರಹೋಗಿ ಆ ಶಿಲೆಯನ್ನು ತೆಗೆದು ಅದಕ್ಕೆ ಎಳ್ಳೆಣ್ಣೆಯನ್ನು ಹಚ್ಚಿ,

ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂ ಗತಿಂ |

ಗತೋಽಸಿ ದಿವ್ಯದೇಹೇನ ಕುಶೇ ತ್ವಾಽಹಂ ನಿಯೋಜಯೇ ||

ಎಂದು ಹೇಳಿ ನೀರಿಗೆಹಾಕಬೇಕು. ಅನಂತರ ಮನೆಗೆ ಹೋಗಿ ಮೊದಲಿನ ದೀಪವನ್ನೂ, ಅದರ ಬತ್ತಿಯನ್ನೂ ಬದಲಿಸಿ ಶಿಕ್ಯ (ಸಿಕ್ಕ) ದಲ್ಲಿರುವ ನೀರಿನ ಮತ್ತು ಹಾಲಿನ ಪಾತ್ರಗಳನ್ನು ತೆಗೆದು ವಿಸರ್ಜಿಸಿ ಸ್ಥಳವನ್ನು ಶುದ್ಧಮಾಡಿ ಕರ್ತೃವೊದಲಾದ ಬಾಂಧವರೂ, ಸಂಬಂಧಿಗಳೂ ಕೂಡ ನೀರಿನ ಹತ್ತಿರ ಹೋಗಿ ಅಂಜಲಿಯಲ್ಲಿ ನೀರನ್ನು ತೆಗೆದು

.... ..ಗೋತ್ರ ... ...ಪ್ರೇತೇದಂ ತೇ ಧರ್ಮೋದಕಮುಪತಿಷ್ಠತಾಂ | ಎಂದು ಹೇಳಿ ಎಲ್ಲರೂ ಮೂರು ಮೂರುಸಲ ಪ್ರೇತವನ್ನುದ್ದೇಶಿಸಿ ದಡದಲ್ಲಿ ಅಂಜಲಿಯ ನೀರನ್ನೆರೆಯಬೇಕು.

ಅನಂತರ ಕರ್ತೃ ಮೊದಲಾದವರು ವಸ್ತ್ರೋತ್ತರೀಯ ಮೊದಲಾದ ಬಟ್ಟೆಗಳನ್ನು ಮಡಿಮಾಡಲು ರಜಕನಿಗೆಕೊಟ್ಟು (ಮರುದಿನ ಬೆಳಗಿನ ಜಾವಕ್ಕೆ ಅದನ್ನು ಪುನಃ ತಂದುಕೊಡಲು ಹೇಳಿ) ಸರ್ವಾಂಗ ಕ್ಷೌರಮಾಡಿಸಿ [1] ತೈಲಾಭ್ಯಂಗವನ್ನು ಮಾಡಿ ಎಲ್ಲರೂ ನೀರಿನಲ್ಲಿ

[1] ಗರುಡ ಪುರಾಣದಲ್ಲಿ ಈ ತೈಲಾಭ್ಯಂಗವು ಪ್ರೇತತೃಪ್ತಿಗಾಗಿ ಒಂಭತ್ತನೇದಿನದಲ್ಲಿ ಹೇಳಲ್ಪಟ್ಟಿದೆ.

# ಪರಿಶಿಷ್ಟ.

## ಮೃತದೇಹದಲ್ಲಿ ಪ್ರಾಣಪ್ರತಿಷ್ಠೆ ಮಾಡುವ ವಿಧಿ.

ಪಿತ್ರಾದಿಗಳ ಪ್ರಾಣೋತ್ಕ್ರಮಣ ಕಾಲದಲ್ಲಿ ಕಾರಣಾಂತರದಿಂದ ಪುತ್ರಾದಿಗಳು ಕರ್ಣಸೂಕ್ತಜಪ ಮುಂತಾದವುಗಳನ್ನು ಮಾಡದೆ ಹೋದರೆ-

ಪುತ್ರಾದಿಗಳು ಆಚಮನ ಪ್ರಾಣಾಯಾಮಾದಿಗಳನ್ನು ಮಾಡಿ (ಪ್ರಾಚೀ) .. ... ಗೋತ್ರಸ್ಯ ಮಮ ಪಿತುಃ ( ಮಾತ್ರಾದೇರ್ವಾ ) ಮೃತೇಃ ಪರಂ ಔರ್ಧ್ವದೈಹಿಕವಿಧ್ಯರ್ಥಂ ಅಸ್ಮಾಭಿಃ ಕ್ರಿಯಮಾಣ ಪುಣ್ಯಸೂಕ್ತಾದಿ ಜಪಾತ್ ಪೂರ್ವಂ ತಚ್ಛ್ರವಣ ಯೋಗ್ಯತಾಸಿದ್ಧ್ಯರ್ಥಂ ಕಾರಣಶರೀರಿಣೋ ಜೀವಸ್ಯ ಪುನಃ ಸ್ಥೂಲದೇಹೆ ಪ್ರವೇಶನಾಯ ಮಾಪ್ರಗಾಮಾದಿ ಮಂತ್ರಜಪಂ ಕರಿಷ್ಯೇ ॥ ಎಂದು ಸಂಕಲ್ಪಿಸಿ (ಉಪ) ಪ್ರಾಯಶ್ಚಿತ್ತವಿಟ್ಟು (ಪ್ರಾಚೀ) ದರ್ಭೆ ಯಿಂದ ಅಥವಾ ಕೈಯಿಂದ ಶವದ ಹೃದಯವನ್ನು ಮುಟ್ಟಿ ಈ ಮಂತ್ರಗಳನ್ನು ಹೇಳಬೇಕು.

ಮಾಪ್ರಗಾಮೇತಿ ಷಡೃಚಸ್ಯ ಸೂಕ್ತಸ್ಯ ಗೌಪಾಯನಾ ಬಂಧುಶ್ರುತಬಂಧು ರ್ವಿಪ್ರಬಂಧುರ್ವಿಶ್ವೇದೇವಾ ಗಾಯತ್ರೀ ಪ್ರಾಣಪ್ರತಿಷ್ಠಾಪನೇ ವಿನಿಯೋಗಃ ॥

ಓಂ ಮಾಪ್ರಗಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ ।
ಮಾಂತಸ್ಥುರ್ನೋ ಅರಾತಯಃ । ಯೋ ಯಜ್ಞಸ್ಯ ಪ್ರಸಾಧನಸ್ತಂತು
ರ್ದೇವೇಷ್ವಾತತಃ । ತಮಾಹುತಂನಶೀಮಹಿ ॥ ಮನೋನ್ವಾಹುವಾಮಹೇ

ನಾರಾಶಂಸೇನ ಸೋಮೇನ । ಪಿತೄಣಾಂಚ ಮನ್ಮಭಿಃ । ಆತ ಏತು ಮನಃ ಪುನಃ ಕ್ರತ್ವೇ ದಕ್ಷಾಯ ಜೀವಸೇ । ಜ್ಯೋಕ್ಚ ಸೂರ್ಯಂದೃಶೇ । ಪುನರ್ನಃ ಪಿತರೋ ಮನೋದದಾತು ದೈವ್ಯೋ ಜನಃ । ಜೀವಂ ವ್ರಾತಂ ಸಚೇಮಹಿ । ವಯಂ ಸೋಮ ವ್ರತೇ ತವ ಮನಸ್ತನೂಷು ಬಿಭ್ರತಃ ಪ್ರಜಾವಂತ ಸ್ಸಚೇಮಹಿ ॥

ಯತ್ತೇ ಯಮಮಿತಿ ದ್ವಾದಶರ್ಚಸ್ಯ ಸೂಕ್ತಸ್ಯ ಗೌಪಾಯನಾ ಬಂಧು ಶ್ರುತಬಂಧು ರ್ವಿಪ್ರಬಂಧು ರ್ಮನೋಽನುಷ್ಟುಪ್ ಪ್ರಾಣಪ್ರತ್ಯಾವರ್ತನೇ ವಿನಿಯೋಗಃ ॥

ಓಂ ಯತ್ತೇ ಯಮಂ ವೈವಸ್ವತಂ ಮನೋ ಜಗಾಮ ದೂರಕಂ ।
ತತ್ತ ಆವರ್ತಯಾಮಸೀಹ ಕ್ಷಯಾಯ ಜೀವಸೇ ॥
ಯತ್ತೇ ದಿವಂ ಯತ್ ಪೃಥಿವೀಂ ಮನೋ ಜಗಾಮ ದೂರಕಂ ।
ತತ್ತ ಆವರ್ತ . ...... ....... ಸೇ ॥

ಯತ್ತೇ ಭೂಮಿಂ ಚತುರ್ಭೃಷ್ಟಿಂ ಮನೋ ಜಗಾಮ ದೂರಕಂ ।
ತತ್ತ ಆವರ್ತ .... ....... ಸೇ ॥ ( 3 ನೆಯ ಮುಕ್ಕು )

ತತ್ತ ಆವರ್ತ ............ ಸೇ ॥

ಯತ್ತೇ ಮರೀಚೀಃ ಪ್ರವತೋ ಮನೋ ಜಗಾಮ ದೂರಕಂ ।
ತತ್ತ ಆವರ್ತ ... ... ... ಸೇ ॥

ಯತ್ತೇ ಅಪೋ ಯದೋಷಧೀ ರ್ಮನೋ ಜಗಾಮ ದೂರಕಂ ।
ತತ್ತ ಆವರ್ತ ... ... .. ಸೇ ॥

ಯತ್ತೇ ಸೂರ್ಯಂ ಯದು ಷಸಂ ಮನೋ ಜಗಾಮ ದೂರಕಂ ।
ತತ್ತ ಆವರ್ತ ... .. .. ಸೇ ॥

ಯತ್ತೇ ಪರ್ವತಾನ್ ಬೃಹತೋ ಮನೋ ಜಗಾಮ ದೂರಕಂ ।
ತತ್ತ ಆವರ್ತ ............ ಸೇ ॥

ಯತ್ತೇ ವಿಶ್ವಮಿದಂ ಜಗನ್ಮನೋ ಜಗಾಮ ದೂರಕಂ ।
ತತ್ತ ಆವರ್ತ ....... ... ಸೇ ॥

ಯತ್ತೇ ಪರಾಃ ಪರಾವತೋ ಮನೋ ಜಗಾಮ ದೂರಕಂ ।
ತತ್ತ ಆವರ್ತ ....... ... ಸೇ ॥

ಯತ್ತೇ ಭೂತಂಚ ಭವ್ಯಂಚ ಮನೋ ಜಗಾಮ ದೂರಕಂ ।
ತತ್ತ ಆವರ್ತ ............... ಸೇ ॥

ಅಸುನೀತ ಇತಿ ತಿಸೃಣಾಂ ಗೌಪಾಯನಾ ಬಂಧ್ವಾದಯ ಋಷಯಃ ಅಸುನೀತಿದೇವೀ ತ್ರಿಷ್ಟುಪ್ ಪ್ರಾಣ ಪ್ರತ್ಯಾವರ್ತನೇ ವಿನಿಯೋಗಃ ||

ಓಂ ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತವೇ ಸುಪ್ರತಿರಾನ ಆಯುಃ |

ರಾರಂಧಿನಃ ಸೂರ್ಯಸ್ಯ ಸಂದೃಶಿ ಘೃತೇನತ್ವಂ ತನ್ವಂ ವರ್ಧಯಸ್ವ ||

ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣ ಮಿಹನೋಧೇಹಿ ಭೋಗಂ |

ಜ್ಯೋಕ್‌ಪಶ್ಯೇಮ ಸೂರ್ಯ ಮುಚ್ಚರಂತ ಮನುಮತೇ ಮೃಳಯಾ ನಸ್ಸ್ವಸ್ತಿ ||

ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಂ |

ಪುನರ್ನಸ್ಸೋಮ ಸ್ತನ್ವಂದದಾತು ಪುನಃ ಪೂಷಾ ಪಥ್ಯಾ ೩ಂ ಯಾಸ್ವಸ್ತಿಃ |

ಈ ಮಂತ್ರಗಳನ್ನು ಜಪಿಸುತ್ತಾ ಮೃತದೇಹದಲ್ಲಿ ಪ್ರಾಣಪ್ರವೇಶವನ್ನು ಭಾವಿಸಿ ಆಮೇಲೆ ಪುಣ್ಯಸೂಕ್ತಾದಿಗಳನ್ನು ಕೇಳಿಸಿ ಪುನಃ ಸತ್ತಂತೆ ಭಾವಿಸಿ ಅನಂತರ ಔರ್ಧ್ವದೈಹಿಕ ವಿಧಿಯಿಂದ ದಹಿಸಬೇಕು.

## * ಅಸ್ಥಿ ದಹನ ವಿಧಿ.

ಅಮಂತ್ರಕವಾಗಿ ಪಿತ್ರಾದಿಗಳು ದಹಿಸಲ್ಪಟ್ಟಿದ್ದರೆ ಆಮೇಲೆ ಅವರ ಅಸ್ಥಿಗಳನ್ನಾದರೂ ಸಮಂತ್ರಕವಾಗಿ ದಹಿಸಬೇಕು.

---

* ಇದು ಆಶ್ವಲಾಯನ ಪ್ರಯೋಗದಲ್ಲಿ ಸಿಗುವುದಿಲ್ಲವಾದರೂ "ಅನುಕ್ತ ಮನ್ಯತೋಗ್ರಾಹ್ಯಂ" ಎಂಬ ನ್ಯಾಯಾನುಸಾರ ಅಗತ್ಯವಾಗಿ ಮಾಡತಕ್ಕದ್ದು.

ಕರ್ತೃವು ಬೇಕಾದ ಸಾಮಾನಿನೊಂದಿಗೆ ಸ್ಮಶಾನಕ್ಕೆ ಹೋಗಿ ಬೂದಿಗೆ ಸ್ವಲ್ಪ ನೀರುಪ್ರೋಕ್ಷಿಸಿ ಪ್ರೇತದ ತಲೆಯಿಂದ ಒಂದು, ಎದೆ, ಹೊಟ್ಟೆ, ಎರಡು ತೊಡೆ, ಎರಡು ಕೈಗಳು, ಎರಡು ಪಾದಗಳು, ಇವುಗಳಿಂದ ನಾಲ್ಕುನಾಲ್ಕು ಹೀಗೆ ಒಟ್ಟು ೩೩ ಎಲುಬುಗಳನ್ನು ಹೆಕ್ಕಿ ತೆಗೆದು ನೀರಿನಿಂದ ತೊಳೆದು ತುಪ್ಪಹಚ್ಚಿ ಕೃಷ್ಣಾಜಿನವನ್ನು ಪೂರ್ವಕ್ಕೆ ಅದರ ಕಂಠವಾಗುವಂತೆಯೂ ಕೆಳಗೆ ರೋಮಗಳಾಗುವಂತೆಯೂ ಬಿಡಿಸಿ ಅದರಲ್ಲಿ ಎಲುಬುಗಳನ್ನಿಟ್ಟು ಮುಂದಿನ ಮಂತ್ರಗಳನ್ನು ಹೇಳುತ್ತಾ ಮನುಷ್ಯಾಕಾರವನ್ನು ಮಾಡಬೇಕು.

ಓಂ ಇಂದ್ರೋ ದಧೀಚೋ ಅಸ್ಥಭಿರ್ವೃತ್ರಾಣ್ಯ ಪ್ರತಿಷ್ಕುತಃ ।
ಜಘಾನ ನವತೀರ್ನವ ॥
ಇಚ್ಛನ್ನ ಶ್ವಸ್ಯ ಯಚ್ಛಿರಃ ಪರ್ವತೇಷ್ವಪಶ್ರಿತಂ ।
ತದ್ವಿದ ಚ್ಛರ್ಯಣಾವತಿ ॥
ಅತ್ರಾಹ ಗೋರ ಮನ್ವತ ನಾಮ ತ್ವಷ್ಟುರಪೀಚ್ಯಂ ।
ಇತ್ಥಾ ಚಂದ್ರಮಸೋಗೃಹೇ ॥
ಇಂದ್ರ ಮಿದ್ಗಾಥಿನೋ ಬೃಹದಿಂದ್ರಮರ್ಕೇಭಿರರ್ಕಿಣಃ ।
ಇಂದ್ರಂ ವಾಣೀರನೂಷತ ॥
ಇಂದ್ರ ಇದ್ಧರ್ಯೋಸ್ಸಚಾಸಂಮಿಶ್ಲ ಆವಚೋ ಯುಜಾ ।
ಇಂದ್ರೋ ವಜ್ರೀ ಹಿರಣ್ಯಯಃ ॥

ಇಂದ್ರೋ ದೀರ್ಘಾಯ ಚಕ್ಷಸ ಆಸೂರ್ಯಂ ರೋಹಯದ್ದಿವಿ ।
ವಿಗೋಭಿ ರದ್ರಿ ಮೈರಯತ್ ॥
ಇಂದ್ರ ವಾಜೇಷುನೋ ಅವ ಸಹಸ್ರಪ್ರಧನೇಷುಚ ।
ಉಗ್ರ ಉಗ್ರಾಭಿ ರೂತಿಭಿಃ ॥
ತಮಿಂದ್ರಂ ವಾಜಯಾಮಸಿ ಮಹೇ ವೃತ್ರಾಯ ಹಂತವೇ ।
ಸವೃಷಾ ವೃಷಭೋ ಭುವತ್ ॥
ಇಂದ್ರಸ್ಸದಾ ಮನೇಕೃತ ಓಜಿಷ್ಠಃ ಸಮದೇ ಹಿತಃ ।
ದ್ಯುಮ್ನೀ ಶ್ಲೋಕೀ ಸ ಸೋಮ್ಯಃ ॥
ಗಿರಾ ವಜ್ರೋ ನ ಸಂಭೃತಸ್ಸಬಲೋ ಅನಪಚ್ಯುತಃ ।
ವವಕ್ಷ ಋಷ್ವೋ ಅಸ್ತೃತಃ ॥

ಆಮೇಲೆ " ತಯಾ ದೇವತಯಾಂಗಿರಸ್ವದ್ಧ್ರುವಾಸೀದ " ಎಂಬ ಮಂತ್ರದಿಂದ ಆಯಾ ದೇವತೆಗಳಿಂದ ಕೂಡಿರುವುದಾಗಿ ತಿಳಿಯಬೇಕು. ಅನಂತರ ಸೂದದೋಹಸಂಸ್ಕಾರವನ್ನು ಮಾಡಬೇಕು. ಸೂದದೋಹ ಎಂದರೆ ಪ್ರಾಣಗಳು.

ಓಂ ತಾ ಅಸ್ಯ ಸೂದದೋಹಸಃ ಸೋಮಂ ಶ್ರೀಣಂತಿ ಪೃಶ್ನಯಃ ।
ಜನ್ಮನ್ ದೇವಾನಾಂ ವಿಶಸ್ತ್ರಿಷ್ವಾ ರೋಚನೇ ದಿವಃ ॥

ಎಂಬ ಮಂತ್ರದಿಂದ ಪ್ರಾಣಾದಿಗಳಿಂದ ಕೂಡಿರುವುದಾಗಿ ಭಾವಿಸಬೇಕು. ಅನಂತರ—

ಯಸ್ಯಾಗ್ನಯೋ ಜುಹ್ವತೋ ಮಾಂಸಕಾಮಾ ಸ್ಸಂಕಲ್ಪಯಂತೇ ಯಜಮಾನಮಾಂಸಂ । ಜಾಯಂತುತೇ ಹವಿಷೇ ಸಾದಿತಾಯ ಸ್ವರ್ಗಂ ಲೋಕಮಿಮಂ ಪ್ರೇತಂ ನಯಂತು ॥ ಎಂಬ ಮಂತ್ರದಿಂದ ಪ್ರೇತವನ್ನು ಆವಾಹಿಸಬೇಕು. ಅನಂತರ ಕರ್ತೃವು ಮಿಂದು ಆಚಮನೆ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಗಳನ್ನು ಉಚ್ಚರಿಸಿ ( ಪ್ರಾಚೀ ) ........ ... ಗೋತ್ರಸ್ಯ ... ...... .. ... ಪ್ರೇತಸ್ಯ ಪ್ರೇತತ್ವ ವಿಮೋಚನ ದ್ವಾರಾ ಪಿತೃಲೋಕಾ ವಾಪ್ತ್ಯರ್ಥಂ ಅಸ್ಥಿ ಸಂಸ್ಕಾರ ವಿಧಿನಾ ಪೈತೃಮೇಧಿಕಂ ಕರ್ಮಕರಿಷ್ಯಾಮಿ ಎಂದು ಸಂಕಲ್ಪಿಸಿ ಯಾವದಿಕ್ಕಿನಲ್ಲಿ ಸತ್ತಿದ್ದಾನೋ ಆ ದಿಕ್ಕನ್ನು ನೋಡುತ್ತಾ ( ಓಂ ಯಸ್ಯಾಗ್ನಯೋ ಜುಹ್ವತೋ ಮಾಂಸಕಾಮಾ ಸ್ಸಂಕಲ್ಪಯಂತೇ ಯಜಮಾನಮಾಂಸಂ । ಜಾಯಂತು ತೇ ಹವಿಷೇ ಸಾದಿತಾಯ ಸ್ವರ್ಗಂ ಲೋಕಮಿಮಂ ಪ್ರೇತಂ ನಯಂತು ॥ ಎಂಬ ಮಂತ್ರದಿಂದ ಪ್ರೇತವನ್ನು ಆವಾಹಿಸಿ ವೇಣುಕಾಂಡವನ್ನು ( ಬಿದಿರನ್ನು ) ಎರಡು ಪಾಲಾಗಿ ಸಿಗಿದು ಒಂದರಲ್ಲಿ ಮನುಷ್ಯಾಕಾರವಾಗಿ ಮಾಡಿದ ಅಸ್ಥಿ ದರ್ಭೆ ಕೃಷ್ಣಾಜಿನವನ್ನು ಇಟ್ಟು ಮತ್ತೊಂದರಿಂದ ಮುಚ್ಚಿ ಆಗ್ನಿಹೋತ್ರಿಕ ಯಾ ಔಪಾಸನಾಗ್ನಿಯನ್ನು ಪ್ರತಿಷ್ಠಾಪಿಸಿ ಪ್ರಾಯಶ್ಚಿತ್ತವಿಟ್ಟು ಕರ್ಣಜಪಾದಿ ಎಲ್ಲಾ ಪೈತೃಮೇಧಿಕವನ್ನೂ ಮಾಡಬೇಕು. ಸಂಕಲ್ಪದಲ್ಲಿ “ ಅಸ್ಥಿಮಯ ಶರೀರಂಹವಿಃ ” ಎಂಬುದಾಗಿ ವಿಶೇಷವಾಗಿ ಸೇರಿಸಿಕೊಳ್ಳಬೇಕು. ಬೇರೆಲ್ಲ ಸಮಾನ. ಒಂದು ವೇಳೆ ಗ್ರಾಮದ ಗಡಿಯನ್ನು ದಾಟಿ ಅಗ್ನಿಯನ್ನು ತೆಗೆದುಕೊಂಡು ಹೋದರೆ ಗೃಹ್ಯಾಗ್ನಿಯು ಲೌಕಿಕಾಗ್ನಿ ಆಗುತ್ತದೆಯೆಂದು ತಿಳಿಯಬೇಕು.

ಹೀಗೆ ಅಸ್ಥಿಸಂಸ್ಕಾರ ವಿಧಿಯು.

# ಪಲಾಶಶಾಖಾ ಸಂಸ್ಕಾರಃ

ಪರದೇಶದಲ್ಲಿ ಸತ್ತು ಮಂತ್ರಾಗ್ನಿ, ಅಸ್ಥಿ, ಕಲ್ಲು, ಉತ್ತರೀಯ ಯಾವುದೂ ಸಿಕ್ಕದಿದ್ದರೆ ಈ ವಿಧಿಯನ್ನು ಮಾಡಬೇಕು.

ಆಚಮನ ಪ್ರಾಣಾಯಾಮಗಳನ್ನುಮಾಡಿ ದೇಶಕಾಲಗಳನ್ನು ಉಚ್ಚರಿಸಿ (ಪ್ರಾಚೀ) ............ ಗೋತ್ರಸ್ಯ ........ ಪ್ರೇತಸ್ಯ ಪ್ರೇತತ್ವ ನಿವೃತ್ಯಾ ಉತ್ತಮ ಲೋಕಾವಾಪ್ತ್ಯರ್ಥಂ ಮೃತಾಹಾತ್ ವಿದೇಶಸ್ಥಸ್ಯ ಮರಣೇನ ಪ್ರೇತಸ್ಯ ಮಂತ್ರಾಗ್ನಿರಹಿತಸ್ಯ ಅಸ್ಥಿರಹಿತಾಶ್ಮರಹಿತೋತ್ತರೀಯರಹಿತ ನಿಮಿತ್ತಂ ಔರ್ಧ್ವದೈಹಿಕಕ್ರಿಯಾಧಿಕಾರಾರ್ಥಂ ಪಾಲಾಶವಿಧಿಂ ಕರಿಷ್ಯೇ ‖ ಎಂದು ಸಂಕಲ್ಪಿಸಿ ಪ್ರಾಯಶ್ಚಿತ್ತಕ್ಕೆ ಸ್ವರ್ಣ ತೆಗೆದು (ಉಪ) ಅನಾದಿ ನಿಧನೋ ............... ಭವ ‖ ಎಂದು ಇಟ್ಟು (ಪ್ರಾಚೀ) ಪಿತ್ರಾದೇಃ ಪಲಾಶವಿಧಿಂ ಕರ್ತುಂ ಮಮ ಅಧಿಕಾರ ಸಂಪದಸ್ತ್ವಿತಿ. ಭವಂ ತೋ ನುಗೃಹ್ಣಂತು ‖ ಎಂದು ಹೇಳಿ "ಅಸ್ತು" ಎಂಬ ಅನುಜ್ಞೆಯನ್ನು ಪಡೆದು ತಲೆ ಹೊಟ್ಟೆ, ಎರಡೇ ಕೈಗಳು ಎರಡು ಕಾಲುಗಳು ಇವುಗಳನ್ನು ತಯಾರಿಸುವುದಕ್ಕೆ ಐದು ಪಲಾಶದ ಕೊಂಬೆಗಳನ್ನು ಕಟ್ಟಿ ಆದರಮೇಲೆ ಅಕ್ಕಿಹಿಟ್ಟನ್ನು ಲೇಪಿಸಿ ತಲೆಯಿಂದ ಕಾಲಿನ ವರೆಗೆ ದೇಹವನ್ನು ತಯಾರಿಸಿ ಮುಂದೆಹೇಳುವ ಅಂಗಗಳನ್ನು 360 ಪಲಾಶದ ಎಲೆಗಳಿಂದ ನಿರ್ಮಿಸಬೇಕು. ಹೇಗೆಂದರೆ—

| | | |
|---|---|---|
| ತಲೆಗೆ | .... | 40 |
| ಕತ್ತಿಗೆ | .... | 10 |
| ಕೈಗಳಿಗೆ ಐವತ್ತೈವತ್ತು | .... | 100 |
| ಕೈ ಬೆರಳುಗಳಿಗೆ | .... | 10 |
| ಹೊಟ್ಟೆಗೆ | .... | 30 |
| ಕೆಳಹೊಟ್ಟೆಗೆ | .... | 20 |

| | | |
|---|---|---|
| ಲಿಂಗಕ್ಕೆ | .... | 4 |
| ವೃಷಣಗಳಿಗೆ ಮೂರುಮೂರು | ... | 6 |
| ತೊಡೆಗಳಿಂದ ಪಾದಗಳ ವರೆಗೆ ಐವತ್ತೈವತ್ತು | .... | 100 |
| ಪಾದಗಳಿಗೆ ಹದಿನೈದು ಹದಿನೈದು | .... | 30 |
| ಎಲ್ಲಾ ಕಾಲು ಬೆರಳಿಗೆ ಹತ್ತು | .... | 10 |
| ಜುಮ್ಲಾ | ... | 360 |

ಹೀಗೆ ತಯಾರಿಸಿ ಪಟ್ಟೆದಾರದಿಂದ ದೇಹವನ್ನು ಬೇಕಾದಂತೆ ಕಟ್ಟಿ ಒದ್ದೆ ಮಾಡಿದ ಯವಪಿಷ್ಟದಿಂದ ಲೇಪಿಸಬೇಕು. ಅನಂತರ ಮುಂದೆ ಹೇಳುವ ದ್ರವ್ಯಗಳನ್ನು ಆಯಾ ಅಂಗಗಳಲ್ಲಿ ಇಡಬೇಕು—

| | | |
|---|---|---|
| ತಲೆಯಲ್ಲಿ | .... | ಬಾಳೆಹಣ್ಣು |
| ಶಿರಸ್ಸಿನಲ್ಲಿ | .... | ವರ್ತುಲ ಅಥವಾ ಉದ್ದವಾದ ಹಣ್ಣು |
| ಹಣೆಯಲ್ಲಿ | .... | ಬಾಳೆಯೆಲೆ |
| ಹಲ್ಲುಗಳಿಗೆ | .... | ದಾಳಿಂಬೆ ಬೀಜಗಳು |
| ಕಿವಿಗೆ | .... | ಬಳೆ |
| ಕಣ್ಣುಗಳಿಗೆ | .... | ತಾವರೆ ಬೀಜಗಳು |
| ಮೂಗಿಗೆ | .... | ಎಳ್ಳಿನ ಹೂವು |
| ನಾಭಿಗೆ | .... | ಅಭ್ರಕ |
| ಸ್ತನಗಳಿಗೆ | .... | ಲಿಂಬೆ ಹಣ್ಣುಗಳೆರಡು |
| ವಾತದಲ್ಲಿ | .... | ಮನಶ್ಶಿಲೆ |
| ಪಿತ್ತದಲ್ಲಿ | .... | ಹರಿದಾಳ |

| | | |
|---|---|---|
| ಕಫದಲ್ಲಿ | ... | ಅಫೀಮು |
| ರಕ್ತದಲ್ಲಿ | .... | ಜೇನು |
| ಮಲದಲ್ಲಿ | .... | ಗೋಮಯ |
| ಮೂತ್ರದಲ್ಲಿ | .... | ಗೋಮೂತ್ರ |
| ರೇತಸ್ಸಿನಲ್ಲಿ | .... | ಪಾದ್ರಸ |
| ವೃಷಣದಲ್ಲಿ | .... | ಗುಳ್ಳದ ಬದನೆಕಾಯಿಗಳೆರಡು |
| ಲಿಂಗದಲ್ಲಿ | .... | ಬೆಳ್ಳುಳ್ಳಿ |
| ಕೂದಲುಗಳಲ್ಲಿ | .... | ಹಂದಿ ರೋಮಗಳು |
| ರೋಮಗಳಲ್ಲಿ | ... | ಉಣ್ಣೆಯ ಬಟ್ಟೆ |
| ಮಾಂಸದ ಬದಲಿಗೆ | .... | ಯವದ ಅಥವಾ ಉದ್ದಿನ ಯಾ ಅಕ್ಕಿಯ ಹಿಟ್ಟಿನಿಂದ ಲೇಪಿಸುವುದು |

ಆಮೇಲೆ ಪಂಚಗವ್ಯದಿಂದ ಪ್ರೋಕ್ಷಿಸಿ. ಪಂಚಾಮೃತ ಮಂತ್ರದಿಂದ ಪಂಚಾಮೃತ ಪ್ರೋಕ್ಷಿಸಿ, ಪುನರ್ನೋ ಅಸುಮತಿ ಬೃಹದುಕ್ಥಃ ಪ್ರಾಣ ಸ್ತ್ರಿಷ್ಟುಪ್ ಪ್ರಾಣಪ್ರವೇಶನೇ ವಿನಿಯೋಗಃ ॥

ಓಂ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಂ ।
ಪುನರ್ನಸ್ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾ ೩ಂ ಯಾ ಸ್ವಸ್ತಿಃ ।

ಎಂದು ಪ್ರಾಣಪ್ರವೇಶವನ್ನು ಭಾವಿಸಬೇಕು. ಅಥವಾ " ಯತ್ತೇಯಮಂ " ಎಂಬ ಹನ್ನೆರಡು ಋಕ್ಕುಗಳಿಂದ ಪ್ರಾಣಗಳನ್ನು ತಂದು " ಶುಕ್ರಮಸಿ ಜ್ಯೋತಿರಸಿ " ಎಂಬ ಮಂತ್ರದಿಂದ ಪಾದದಲ್ಲಿಟ್ಟು ಮುಂದೆ ಹೇಳುವ ಆರು ಮಂತ್ರಗಳಿಂದ ಶರೀರವನ್ನು ಮುಟ್ಟಿ ಜಪಿಸಬೇಕು.

ಅಕ್ಷೀಭ್ಯಾಮಿತಿ ಷಣ್ಣಾಂ ವಿವೃಹಾ
ಯಕ್ಷ್ಮಘ್ನಾನುಷ್ಟುಪ್ ಜಪೇವಿನಿಯೋಗಃ ॥

ಓಂ ಅಕ್ಷೀಭ್ಯಾಂ ತೇ ನಾಸಿಕಾಭ್ಯಾಂ ಕರ್ಣಾಭ್ಯಾಂ ಛುಬುಕಾದಧಿ ।
ಯಕ್ಷ್ಮಂ ಶೀರ್ಷಣ್ಯಂ ಮಸ್ತಿಷ್ಕಾಜ್ಜಿಹ್ವಾಯಾ ವಿವೃಹಾಮಿ ತೇ ॥
ಗ್ರೀವಾಭ್ಯಸ್ತ ಉಷ್ಣಿಹಾಭ್ಯಃ ಕೀಕಸಾಭ್ಯೋ ಅನೂಕ್ಯಾತ್ ।
ಯಕ್ಷ್ಮಂ ದೋಷಣ್ಯಾ೧ ಮಂಸಾಭ್ಯಾಂ ಬಾಹುಭ್ಯಾಂ ವಿವೃಹಾಮಿ ತೇ ॥

ಆಂತ್ರೇಭ್ಯಸ್ತೇ ಗುದಾಭ್ಯೋವನಿಷ್ಠೋರ್ಹೃದಯಾದಧಿ ।
ಯಕ್ಷ್ಮಂ ಮತಸ್ನಾಭ್ಯಾಂ ಯಕ್ನಃ ಪ್ಲಾಶಿಭ್ಯೋ ವಿವೃಹಾಮಿ ತೇ ॥
ಊರುಭ್ಯಾಂ ತೇ ಅಷ್ಠೀವದ್ಭ್ಯಾಂ ಪಾರ್ಷ್ಣಿಭ್ಯಾಂ ಪ್ರಪದಾಭ್ಯಾಂ ।
ಯಕ್ಷ್ಮಂ ಶ್ರೋಣಿಭ್ಯಾಂ ಭಾಸದಾದ್ಭಂಸಸೋ ವಿವೃಹಾಮಿ ತೇ ॥
ಮೇಹನಾದ್ವನಂಕರಣಾಲ್ಲೋಮಭ್ಯಸ್ತೇ ನಖೇಭ್ಯಃ ।
ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿವೃಹಾಮಿ ತೇ ॥
ಅಂಗಾದಂಗಾಲ್ಲೋಮ್ನೋ ಲೋಮ್ನೋ ಜಾತಂ ಪರ್ವಣಿ ಪರ್ವಣಿ ।
ಯಕ್ಷ್ಮಂ ಸರ್ವಸ್ಮಾದಾತ್ಮನಸ್ತಮಿದಂ ವಿವೃಹಾಮಿ ತೇ ॥

ಎಂದು ಜಪಿಸಿ ಶರೀರವನ್ನು ಜೀವವಿದ್ದುದನ್ನಾಗಿ ಭಾವಿಸಿ ಸ್ನಾನ ಮಾಡಿಸಿ ಗಂಧಲೇಪಿಸಿ ವಸ್ತ್ರಗಳನ್ನು ಉಡಿಸಿ ಯಜ್ಞೋಪವೀತಗಳನ್ನು ಹಾಕಿ

ಒಳ್ಳೆಯ ಗಂಧಮಾಲ್ಯಾದಿಗಳಿಂದ ಅಲಂಕರಿಸಿ " ಅಯಂ ಸಃ ಅಮುಕ ದೇವ ದತ್ತಾದಿ ನಾಮಾ " ಎಂದು ಮೃತರ ಹೆಸರನ್ನು ಹೇಳಿ " ಇದಂ ಚಾಸ್ಯೌ ಪಾಸನಂ " ಎಂದು ಅಗ್ನಿಯನ್ನು ಧ್ಯಾನಿಸಿ ಮೊದಲು ಹೇಳಿದ ವೈತರಣ್ಯಾದಿ ದಾನಪೂರ್ವಕ ಕರ್ಣಸೂಕ್ತ ಜಪ ಮೊದಲಾದ ಎಲ್ಲವನ್ನೂ ಮಾಡಿ ಪಟ್ಟೆಯದಾರದಿಂದ ಸುತ್ತಿ ರೋಮ ಕೆಳಗಾಗುವಂತೆ ಕೃಷ್ಣಾಜಿನದಿಂದ ಮುಚ್ಚಿ ಸ್ಮಶಾನಕ್ಕೆ ಕೊಂಡುಹೋಗಿ ಶವವನ್ನು ಸುಡುವಂತೆ ಸುಡಬೇಕು ಪಲಾಶದೆಲೆ ಸಿಕ್ಕದಿದ್ದರೆ ದರ್ಭೆಯಿಂದ ಪ್ರತಿಕೃತಿಯನ್ನು ಮಾಡಬೇಕು. ★

## ದಕ್ಷಿಣಾಯನದಲ್ಲಿ ಸತ್ತರೆ ಮಾಡಬೇಕಾದ ಪ್ರಾಯಶ್ಚಿತ್ತ.

ಕರ್ತೃವು ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಗಳನ್ನು ಚ್ಚರಿಸಿ (ಪ್ರಾಚೀ) ... ... ಗೋತ್ರಸ್ಯ ... ... ಪ್ರೇತಸ್ಯ ದಕ್ಷಿಣಾಯನ ಮರಣಜನಿತ ಸಮಸ್ತ ದೋಷಸಂಹಾರಾರ್ಥಂ ಉತ್ತರಾಯಣ ಸಂಪತ್ತಿದ್ವಾರಾ ಉತ್ತಮಲೋಕಾವಾಪ್ತ್ಯರ್ಥಂ " ತಾ ಸೂರ್ಯಾ ಚಂದ್ರಮಸಾ " ಇತ್ಯಾದಿ

---

★ ಆಶೌಚ ವಿಚಾರ.

ಆಹಿತಾಗ್ನಿಯ ಪ್ರತಿಕೃತಿದಾಹದಲ್ಲಿಯಾಗಲಿ, ಅಸ್ಥಿದಾಹದಲ್ಲಿಯಾಗಲಿ ಹತ್ತು ದಿನವೇ ಆಶೌಚ. ಆಹಿತಾಗ್ನಿಯದ್ದಲ್ಲದಿದ್ದರೆ ಸಪಿಂಡರಿಗೆ ಪರ್ಣಶರದಾಹದಲ್ಲಿ ಮೂರುದಿನ ಆಶೌಚ. ಮೊದಲು ಆಶೌಚ ಸಿಕ್ಕದೆ ಇದ್ದ ಹೆಂಡತಿ ಮಕ್ಕಳಿಗೆ ಹತ್ತು ದಿವಸವೇ ಇದೆ. ಮೊದಲು ಆಶೌಚ ಸಿಕ್ಕಿದ್ದರೆ ಅವರಿಗೂ ಮೂರೇ ರಾತ್ರಿ. ಪತ್ನೀ ಸಂಸ್ಕಾರದಲ್ಲಿ ಪತಿಗೂ ಹೀಗೆಯೇ. ಸವತೀ ತಾಯಿಯಿದ್ದು ಅವಳ ಮಗನಿಗೆ ಹತ್ತು ದಿವಸಾನಂತರವಾದರೆ ಮೂರುದಿನ ಆಶೌಚ. ಆಹಿತಾಗ್ನಿಯು ಪರದೇಶದಲ್ಲಿದ್ದಾಗ ಮರಣಹೊಂದಿದರೆ ಎಷ್ಟರತನಕ ವಿಧಿಪ್ರಕಾರ ಸಂಸ್ಕಾರವಾಗುವುದಿಲ್ಲವೊ ಅತನಕ ಪುತ್ರಾದಿಗಳಿಗೆ ಆಶೌಚವಿಲ್ಲವೆಂದು ತಿಳಿಯಬೇಕು.

ಷಣ್ಮಂತ್ರೈಃ ಪ್ರಾಯಶ್ಚಿತ್ತಾಜ್ಯಾಹುತೀರ್ಹೋಷ್ಯೇ ! ಎಂದು ಸಂಕಲ್ಪಿಸಿ ಅಗ್ನಿ ಪ್ರತಿಷ್ಠಾಪನೆಯನ್ನು ಮಾಡಿ ಅಪ್ರದಕ್ಷಿಣ ಪರಿಷೇಚಿಸಿ ಸ್ರುಕ್ಕಿನಲ್ಲಿ ನಾಲ್ಕುಸಲ ತುಪ್ಪತುಂಬಿಸಿ ದಕ್ಷಿಣಕ್ಕೆ ಮುಖಮಾಡಿ ಕುಳಿತು ಹೋಮಿಸಲಿಕ್ಕಿರುವ ಮಂತ್ರ "ಓಂ ಮೃತ್ಯೋರಧಿಷ್ಠಾನಾಯ ಸ್ವಾಹಾ । ಮೃತ್ಯೋರಧಿಷ್ಠಾನಾಯೇದಂ" ಎಂದು ಹೇಳಿ ಪುನಃ ಬೇರೆಬೇರೆಯಾಗಿ ನಾಲ್ಕುಸಲ ತುಪ್ಪತೆಗೆದು ಮುಂದಿನ ಆರು ಮಂತ್ರಗಳಿಂದ ಹೋಮಿಸಬೇಕು.

ಓಂ ತಾ ಸೂರ್ಯಾಚಂದ್ರಮಸಾ ವಿಶ್ವಭೃತ್ತಮಾಮಹತ್ । ತೇಜೋ ವಸುಮದ್ರಾಜತೋ ದಿವಿ ॥ ಸಾಮಾತ್ಮಾನಾ ಚರತಸ್ಸಾಮ ಚಾರಿಣಾ । ಯಯೋರ್ವ್ರತಂ ನ ಮಮೇ ಜಾತು ದೇವಯೋಃ ಸ್ವಾಹಾ ॥

ಸೂರ್ಯಾಚಂದ್ರಮೋಭ್ಯಾಮಿದಂ ನ ಮಮ ॥

ಓಂ ಉಭಾವಂತೌ ಪರಿಯಾತ ಅಮ್ರ್ಯಾದಿವೋ ನ ರಶ್ಮೀಗ್ಂಸ್ತನುತೋ ವ್ಯರ್ಣವೇ । ಉಭಾ ಭುವಂತೀ ಭುವನಾ ಕವಿಕ್ರತೂ ಸೂರ್ಯಾನ ಚಂದ್ರಾ ಚರತೋ ಹತಾಮತೀ ಸ್ವಾಹಾ ॥

ಸೂರ್ಯಾಚಂದ್ರಮೋಭ್ಯಾಮಿದಂ ನ ಮಮ ॥

ಓಂ ಪತೀ ದ್ಯುಮದ್ವಿಶ್ವವಿದಾ ಉಭಾ ದಿವಃ । ಸೂರ್ಯಾ ಉಭಾ ಚಂದ್ರಮಸಾ ವಿಚಕ್ಷಣಾ ॥ ವಿಶ್ವವಾರಾ ವರಿವೋ ಭಾವರೇಣ್ಯಾ ।

ತಾ ನೋಽವತಂ ಮತಿಮಂತಾ ಮಹಿವ್ರತಾಸ್ಸ್ವಾಹಾ ॥

ಸೂರ್ಯಾಚಂದ್ರಮೋಭ್ಯಾಮಿದಂ ನ ಮಮ ॥

ಓಂ ವಿಶ್ವಮುಪರೀ ಪ್ರತರಣಾ ತರಂತಾ । ಸುವರ್ವಿದಾ ದೃಶಯೇ ಭೂರಿರಶ್ಮೀ । ಸೂರ್ಯಾ ಹಿ ಚಂದ್ರಾ ವಸುತ್ವೇಷ ದರ್ಶತಾ । ಮನಸ್ವಿನೋ ಭಾನು ಚರತೋ ನು ಸಂದಿವಗ್ಂ ಸ್ವಾಹಾ ॥

ಸೂರ್ಯಾಚಂದ್ರಮೋಭ್ಯಾಮಿದಂ ನ ಮಮ ॥

ಓಂ ಅಸ್ಯಶ್ರವೋ ನದ್ಯ ಸ್ಸಪ್ತ ಬಿಭ್ರತಿ । ದ್ಯಾವಾಕ್ಷಾಮಾ ಪೃಥಿವೀ ದರ್ಶತಂ ವಪುಃ ॥ ಅಸ್ಮೇ ಸೂರ್ಯಾ ಚಂದ್ರಮಸಾಭಿಚಕ್ಷೇ । ಶ್ರದ್ಧೇ ಕಮಿಂದ್ರ ಚರತೋ ವಿಚರ್ತುರಗ್ಂ ಸ್ವಾಹಾ ॥

ಸೂರ್ಯಾಚಂದ್ರಮೋಭ್ಯಾಮಿದಂ ನ ಮಮ ॥

ಓಂ ಪೂರ್ವಾಪರಂ ಚರತೋ ಮಾಯಯೈತಾ ಶಿಶೂ ಕ್ರೀಡಂತಾ ಪರಿಯಾತೋ ಅಧ್ವರಂ । ವಿಶ್ವಾನ್ಯನ್ಯೋ ಭುವನಾಭಿಚಷ್ಟ ಋತೂನನ್ಯೋ ವಿದಧಜ್ಜಾಯತೇ ಪುನಸ್ಸ್ವಾಹಾ ॥

ಸೂರ್ಯಾಚಂದ್ರಮೋಭ್ಯಾಮಿದಂ ನ ಮಮ ॥

ಹೀಗೆ ಆರುಮಂತ್ರಗಳಿಂದ ಹೋಮಿಸಿ ಅಗ್ನಿಯನ್ನು ಅಪ್ರದಕ್ಷಿಣವಾಗಿ ಪರಿಷೇಚಿಸಿ ಹೋಮವನ್ನು ಪೂರ್ಣಗೊಳಿಸಬೇಕು. ಆಮೇಲೆ ................ ಗೋತ್ರಸ್ಯ .......... ... ಪ್ರೇತಸ್ಯ ದಕ್ಷಿಣಾಯನ ಮರಣ ಸೂಚಿತ ಸಮಸ್ತ ದೋಷಪರಿಹಾರಾರ್ಥಂ ಉತ್ತರಾಯಣ ಸಂಪತ್ತಿದ್ವಾರಾ ಉತ್ತಮ ಲೋಕಾವಾಪ್ತ್ಯರ್ಥಂ ಅದ್ಯ ಪ್ರಭೃತ್ಯುತ್ತರಾಯಣಾರಂಭ ದಿನಪರ್ಯಂತಂ ಭವಿಷ್ಯದೌಪಾಸನಾಹುತಿ ಪರಿಮಿತದ್ರವ್ಯಂ ತನ್ನಿಷ್ಕ್ರಯ ಹಿರಣ್ಯಂ ವಾ ಆಶೌಚಾಂತೇ ದಾಸ್ಯೇ ॥ ಎಂದು ಸಂಕಲ್ಪಿಸಿ ಆಶೌಚಾಂತ್ಯದಲ್ಲಿ ದಾನ ಕೊಡಬೇಕು.

## ಕೃಷ್ಣಪಕ್ಷದಲ್ಲಿ ಸತ್ತರೆ ಪ್ರಾಯಶ್ಚಿತ್ತ.

ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಗಳನ್ನುಚ್ಚರಿಸಿ (ಪ್ರಾಚೀ) ........ ... ... ಗೋತ್ರಸ್ಯ ................ ಪ್ರೇತಸ್ಯ ಕೃಷ್ಣಪಕ್ಷ ಮರಣ ಜನಿತ ಸಮಸ್ತದೋಷ ನಿವೃತ್ತ್ಯಾ ಉತ್ತಮ ಲೋಕಾವಾಪ್ತ್ಯರ್ಥಂ "ತಾಸೂರ್ಯ ಚಂದ್ರಮಸಾ" ಇತ್ಯಾದಿ ಷಣ್ಮಂತ್ರೈಃ ಪ್ರಾಯಶ್ಚಿತ್ತಾಜ್ಯಾಹುತೀ ಹೋಷ್ಯೇ ಎಂದು ಸಂಕಲ್ಪಿಸಿ ನಾಲ್ಕುಸಲ ತುಪ್ಪತೆಗೆದು "ಮೃತ್ಯೋರಧಿಷ್ಠಾನಾಯ ಸ್ವಾಹಾ" ಮೃತ್ಯೋರಧಿಷ್ಠಾನಾಯೇದಂ ॥ ಎಂದು ಹೋಮಿಸಿ ತಾಸೂರ್ಯಾದಿ ಆರು ಮಂತ್ರಗಳಿಂದ ನಾಲ್ಕು ನಾಲ್ಕು ಸಲ ತುಪ್ಪತೆಗೆದ್ದು ಎರಡೆರಡು ಸಲ ಹೋಮಿಸಬೇಕು. ಅನಂತರ ................ ಗೋತ್ರಸ್ಯ .... ............ ... ಪ್ರೇತಸ್ಯ ಶುಕ್ಲಪಕ್ಷ ಮರಣ ಸಂಪತ್ತ್ಯರ್ಥಂ ಅದ್ಯ ಪ್ರಭೃತಿ ದರ್ಶಾನ್ತಾನ್ ಸಾಯ ಮೌಪಾಸನ ಹೋಮಾನ್ ಶುಕ್ಲಪ್ರತಿಪತ್ ಪರ್ಯಂತಾನ್ ಪ್ರಾತರೌಪಾಸನ ಹೋಮಾಂಶ್ಚ ಅಪಕೃಷ್ಯ ತಂತ್ರೇಣ ತಂಡುಲೈರ್ಹೋಷ್ಯೇ । ದರ್ಶ ಸ್ಥಾಲೀಪಾಕ ಸಂಪತ್ತ್ಯರ್ಥಂ ಪೂರ್ಣಾಹುತಿಂಚ ಹೋಷ್ಯೇ ॥ ಎಂದು ಸಂಕಲ್ಪಿಸಿ ಅಕ್ಕಿಯನ್ನು ತೊಳೆದು ಅಪಸವ್ಯದಿಂದ ಪರಿಶೇಚಿಸಿ ಒಂದು ಸಮಿಧೆಯನ್ನು ಹೋಮಿಸಿ ಪಾತ್ರದಲ್ಲಿ ಅಮಾವಾಸ್ಯೆ ಪರ್ಯಂತ ವೃದ್ಧಿಕ್ಷಯಾ

ನುಸಾರವಾಗಿ ಆಗುವ ತಿಥಿಯಷ್ಟು ಅಕ್ಕಿಯಮುಷ್ಟಿಯನ್ನು ಒಂದೊಂದು ಸಲ ತೆಗೆದು ಎರಡುಪಾಲು ಮಾಡಿ ಮೊದಲನೆಯ ಪಾಲನ್ನು "ಅಗ್ನಯೇಸ್ವಾಹಾ" ಎಂದೂ ಎರಡನೆಯ ಪಾಲನ್ನು "ಪ್ರಜಾಪತಯೇ ಸ್ವಾಹಾ" ಎಂದೂ ಒಂದೊಂದು ಸಲ ಹೋಮಿಸಬೇಕು. ದರ್ಶಸ್ಥಾಲೀಪಾಕದ ಸ್ಥಾನದಲ್ಲಿ ಸ್ರುಕ್ಕಿನಲ್ಲಿ ನಾಲ್ಕುಸಲ ತುಪ್ಪ ತೆಗೆದು—

ಓಂ ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಂ । ಅಪಾಗ್ಂ ರೇತಾಗ್ಂಸಿ ಜಿನ್ವತೋಂ ೩ ಭುವೋ ಯಜ್ಞಸ್ಯ ರಜಸಶ್ಚ ನೇತಾ ॥ ಯತ್ರಾನಿ ಯುದ್ಭಿಸ್ಸಚಸೇ ಶಿವಾಭಿಃ । ದಿವಿ ಮೂರ್ಧಾನಂ ದಧಿಷೇ ಸುವರ್ಷಾಂ ಜಿಹ್ವಾ ಮಗ್ನೇ ಚಕೃಷೇ ಹವ್ಯ ವಾಹಗ್ಂ ಸ್ವಾಹಾ ॥

ಮೂರ್ಧಾಗ್ನಯ ಇದಂ ॥ ಎಂದು ಪೂರ್ಣಾಹುತಿಮಾಡಿ ಅಗ್ನಿಯನ್ನು ಪುನಃ ಅಪಸವ್ಯದಿಂದ ಪರಿಷೇಚಿಸಬೇಕು.

## ರಾತ್ರಿಯಲ್ಲಿ ಮೃತಪಟ್ಟರೆ ಪ್ರಾಯಶ್ಚಿತ್ತ.

ಆಚಮನ ಪ್ರಾಣಾಯಾಮಗಳನ್ನು ಮಾಡಿ ದೇಶಕಾಲಾದಿಗಳನ್ನುಚ್ಚರಿಸಿ (ಪ್ರಾಚೀ) ............... ಗೋತ್ರಸ್ಯ .......... ಪ್ರೇತಸ್ಯ ರಾತ್ರಿ ಮರಣ ಸಂಭಾವಿತ ಸಮಸ್ತ ದೋಷ ಪರಿಹಾರಾರ್ಥಂ ತಾಸೂರ್ಯಾ ಚಂದ್ರಮಸೇತ್ಯಾದಿ ಋಗ್ಭಿಃ ಪ್ರಾಯಶ್ಚಿತ್ತಾಹುತೀರ್ಹೋಷ್ಯೇ । ಎಂದು ಸಂಕಲ್ಪಿಸಿ ಮೊದಲು ಹೇಳಿದಂತೆ ಹೋಮಿಸಿ ಕೃಷ್ಣಪಕ್ಷದಲ್ಲಿ ಆದರೆ ಮೊದಲು ಹೇಳಿದ ರೀತಿಯಲ್ಲಿ ಔಪಾಸನ ಹೋಮವನ್ನೂ ದರ್ಶಸ್ಥಾಲೀ ಪಾಕವನ್ನೂ ಮಾಡಬೇಕು.

## ನೀರಿನಲ್ಲಿ ಬಿದ್ದು ಸತ್ತರೆ ಪ್ರಾಯಶ್ಚಿತ್ತ.

(ಪ್ರಾಚೀ) ಜಲೇ ಮೃತಸ್ಯ ... ....... ... ಗೋತ್ರಸ್ಯ.................... ಪ್ರೇತಸ್ಯಾಸ್ಯ ಅಪ್ಸು ಮರಣಪ್ರಾಯಶ್ಚಿತ್ತಂ ಕರಿಷ್ಯೇ || ಎಂದು ಸಂಕಲ್ಪಿಸಿ ಸ್ರುಕ್ಕಿಗೆ ನಾಲ್ಕುಸಲ ತುಪ್ಪ ತುಂಬಿಸಿ—

ಓಂ ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ| ತ್ವಾಮವಸ್ಯುರಾಚಕೇ ಸ್ವಾಹಾ || ವರುಣಾಯೇದಂ || ಓಂ ತತ್ವಾ ಯಾಮಿ ಬ್ರಹ್ಮಣಾ ವಂದಮಾನ ಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ| ಅಹೇಡಮಾನೋ ವರುಣೇಹ ಬೋಧ್ಯುರುಶಗ್ಂ ಸಮಾನ ಆಯುಃ ಪ್ರಮೋಷೀಃ ಸ್ವಾಹಾ || ವರುಣಾಯೇದಂ ನ ಮಮ || ಎಂದು ಹೋಮಿಸ ಬೇಕು.

## ಹಾವು ಕಚ್ಚಿ ಸತ್ತರೆ ಪ್ರಾಯಶ್ಚಿತ್ತ.

ಸಂಕಲ್ಪಿಸಿ ನಾಲ್ಕುಸಲ ತೆಗೆದ ತುಪ್ಪದಿಂದ–

ಓಂ ನಮೋ ಅಸ್ತು ಸರ್ಪೇಭ್ಯೋ ಯೇ ಕೇ ಚ ಪೃಥಿವೀ ಮನು| ಯೇ ಅಂತರಿಕ್ಷೇ ಯೇ ದಿವಿ ತೇಭ್ಯ ಸ್ಸರ್ಪೇಭ್ಯೋ ನಮಸ್ಸ್ವಾಹಾ || ಸರ್ಪೇಭ್ಯ ಇದಂ || ಓಂ ಯೇ ದೋರೋಚನೇ ದಿವೋ ಯೇ ವಾ ಸೂರ್ಯಸ್ಯ ರಶ್ಮಿಷು| ಯೇಷಾ ಮಪ್ಸುಷದಃ ಕೃತಂ ತೇಭ್ಯ ಸ್ಸರ್ಪೇಭ್ಯೋ ನಮಸ್ಸ್ವಾಹಾ|

ಸರ್ವೇಭ್ಯ ಇದಂ ॥ ಓಂ ಯಾ ಇಷವೋ ಯಾತುಧಾನಾನಾಂ ಯೇ ವಾ ವನಸ್ಪತೀಗ್ಂ ರನು । ಯೇ ವಾ ವಟೀಷು ಶೇರತೇ ತೇಭ್ಯ ಸ್ಸರ್ವೇಭ್ಯೋ ನಮ ಸ್ಸ್ವಾಹಾ ॥ ಸರ್ವೇಭ್ಯ ಇದಂ ॥ ಎಂದು ಆಹುತಿಗಳನ್ನು ಕೊಡಬೇಕು.

## ಪಶ್ವಾದಿಗಳಿಂದ ಸತ್ತರೆ ಪ್ರಾಯಶ್ಚಿತ್ತ

ಸಂಕಲ್ಪಿಸಿ ನಾಲ್ಕುಸಲ ತೆಗೆದ ತುಪ್ಪದಿಂದ–

ಓಂ ಆಗಾವೋ ಅಗ್ಮನ್ನುತ ಭದ್ರಮಕ್ರನ್ ಸೀದಂತು ಗೋಷ್ಠೇ ರಣಯಂತ್ವಸ್ಮೇ ॥ ಪ್ರಜಾವತೀಃ ಪುರುರೂಪಾ ಇಹಸ್ಯುರಿಂದ್ರಾಯ ಪೂರ್ವೀರುಷಸೋ ದುಹಾನಾ ಸ್ವಾಹಾ । ಗೋಭ್ಯ ಇದಂ ನ ಮಮ ॥ ಓಂ ಇಂದ್ರೋಯಜ್ವನೇ ಪೃಣತೇ ಚ ಶಿಕ್ಷತ್ಯು ಪೇದ್ದದಾತಿ ನಸ್ವಂ ಮುಷಾಯತಿ । ಭೂಯೋ ಭೂಯೋರಯಿಮಿದಸ್ಯ ವರ್ಧಯನ್ನಭಿನ್ನೇ ಖಿಲ್ಲೇ ನಿಧದಾತಿ ದೇವಯುಗ್ ಸ್ವಾಹಾ ॥ ಗೋಭ್ಯ ಇದಂ ನ ಮಮ ॥ ಎಂದು ಹೋಮಿಸಬೇಕು.

## ದಂಷ್ಟ್ರಗಳಿಂದ ಸತ್ತರೆ ಪ್ರಾಯಶ್ಚಿತ್ತ

ಸಂಕಲ್ಪಿಸಿ ನಾಲ್ಕುಸಲ ತೆಗೆದ ತುಪ್ಪದಿಂದ–

ಓಂ ದಗ್ಂ ಷ್ಟ್ರಾಭ್ಯಾಂ ಮಲಿಮ್ಲೂ ಜ್ಜಂಭ್ಯೈ ತಸ್ಕರಾಗ್ಂ ಉತ ।

ಹನೂಭ್ಯಾಗ್‌ಸ್ತೇನಾನ್ ಭಗವಸ್ತಾಗ್ ಸ್ತ್ವಂ ಖಾದ ಸುಖಾದಿತಾನ್ ಸ್ವಾಹಾ ॥ ಓಂ ಯೇ ಜನೇಷು ಮಲಿಮ್ಲವ ಸ್ತೇನಾಸಸ್ತಸ್ಕರಾ ವನೇ । ಯೇಕಕ್ಷೇಷ್ವ ಘಾಯವಸ್ತಾಗ್‌ಸ್ತೇ ದಧಾಮಿ ಜಂಭಯೋಸ್ಸ್ವಾಹಾ ॥ ಎಂಬ ಎರಡು ಮಂತ್ರಗಳಿಂದ ಹೋಮಿಸಬೇಕು.

## ಸಮುದ್ರದಲ್ಲಿ ಸತ್ತರೆ ಪ್ರಾಯಶ್ಚಿತ್ತ

ಸಂಕಲ್ಪಿಸಿ ನಾಲ್ಕುಸಲ ತೆಗೆದ ತುಪ್ಪದಿಂದ-

ಓಂ ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ । ನದೀನಾಗ್ಂ ಸರ್ವಾಸಾಂ ಪಿತ್ರೇ ಜುಹುತಾ ವಿಶ್ವಕರ್ಮಣೇ ವಿಶ್ವಾಹಾ ಮರ್ತ್ಯಗ್ಂ ಹವಿಸ್ಸ್ವಾಹಾ ॥ ಸಮುದ್ರಾಯೇದಂ ನ ಮಮ ॥ ಎಂದು ಹೋಮಿಸಬೇಕು.

## ಸಿಡಿಲು ಬಿದ್ದು ಸತ್ತರೆ ಪ್ರಾಯಶ್ಚಿತ್ತ

ಸಂಕಲ್ಪಿಸಿ ನಾಲ್ಕುಸಲ ತೆಗೆದ ತುಪ್ಪದಿಂದ-

ಓಂ ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರ ಮೃತಾಯ ಜಾತಮಗ್ನಿಂ । ಕವಿಗ್ಂ ಸಮ್ರಾಜ ಮತಿಥಿಂ ಜನಾನಾಮಾಸನ್ನಾಪಾತ್ರಂ

ಜನಯಂತ ದೇವಾಸ್ಸ್ವಾಹಾ ॥ ಮೂರ್ಧಾಗ್ನಯ ಇದಂ ನ ಮಮ ॥ ಎಂದು ಹೋಮಿಸಬೇಕು.

## ಮುಟ್ಟಾದವಳು ಯಾ ಬಾಣಂತಿ ಸತ್ತರೆ ಪ್ರಾಯಶ್ಚಿತ್ತ

ದೇಶಕಾಲಗಳನ್ನುಚ್ಚರಿಸಿ (ಪ್ರಾಚೀ) ........ .ಗೋತ್ರಾಯಾ ........... ದಾಯಾಃ ಪ್ರೇತಾಯಾ ರಜಸ್ವಲಾವಸ್ಥಾಯಾಂ ಸೂತಿಕಾವಸ್ಥಾಯಾಂ ವಾ ಮರಣಜನಿತಸಮಸ್ತದುರಿತಪರಿಹಾರದ್ವಾರಾ ಪೈತೃಮೇಧಿಕ ಸಂಸ್ಕಾರ ಯೋಗ್ಯತಾಸಿದ್ಧ್ಯರ್ಥಂ ಗೋಮೂತ್ರಮೃದ್ಭಸ್ಮ ಪಂಚಗವ್ಯೈಃ ಸ್ನಾಪನಂ ಆಶೌಚಾಂತೇ ಚಾಂದ್ರಾಯಣಕೃಚ್ಛ್ರತ್ರಯಪ್ರತ್ಯಾಮ್ನಾಯ ಗೋನಿಷ್ಕ್ರಯ ಹಿರಣ್ಯದಾನಂ ಚ ಕರಿಷ್ಯೇ ॥ ಎಂದು ಸಂಕಲ್ಪಿಸಿ ಅದನ್ನುಮಾಡಿ ಶುದ್ಧಜಲದಿಂದ ಮಿಾಯಿಸಿ ಮೃತ್ ಮತ್ತು ಭಸ್ಮಮಿಶ್ರಿತವಾದ ಪಂಚಗವ್ಯದಿಂದ ಯಾ ಗೋಮೂತ್ರದಿಂದಲಾದರೂ ದರ್ಭೆಯಿಂದ " ದಧಿಕ್ರಾವ್ಣೋ .... ... ಷತ್ ॥ ಅಪೋಹಿಷ್ಠಾ ...ಚನಃ ॥ ಯಚ್ಚಿದ್ಧಿತೇ ವಿಶೋ.... ...ಪ್ರಿಯಾಸಃ ॥ ಹಿರಣ್ಯವರ್ಣಾಶ್ಶುಚಯಃ ......ನಿಧತ್ತ ॥ ಪವಮಾನಸ್ಸುವರ್ಜನಃ ... ... ... ಪುನಾತು ॥ ಓಂ ಭೂಃ ಓಂ ಭುವಃ ಓಗ್ಂ ಸುವಃ ಓಂ ಭೂರ್ಭುವಸ್ಸುವ ರೋಂ ॥ ಮತ್ತೆ ಶತರುದ್ರೀಯದಿಂದಲೂ ॥ ಅಗ್ನಿರ್ಮೂರ್ಧಾ ॥ ಎಂಬ ಅನುವಾಕದಿಂದಲೂ ಪ್ರೋಕ್ಷಿಸಬೇಕು. ಪಂಚಗವ್ಯದಿಂದ ಯೋನಿಯನ್ನುತೊಳೆದು ಬೇರೆ ಬಟ್ಟೆಯಿಂದ ಮುಚ್ಚಿ ವಿಧಿಪ್ರಕಾರ ದಹನಮಾಡಬೇಕು.

---

# ಬ್ರಹ್ಮಚಾರಿ ಸತ್ತರೆ ಪ್ರಾಯಶ್ಚಿತ್ತ

ಸಂಕಲ್ಪಪೂರ್ವಕ ದ್ವಾದಶ ಷಟ್‌ತ್ರೀಣಿ ವಾ ಅಬ್ದಾನಿ ಯಥಾ ಶಕ್ತ್ಯನುಕೂಲ ಪ್ರಾಯಶ್ಚಿತ್ತಗಳನ್ನುಮಾಡಿ ದೇಶಕಾಲಗಳನ್ನುಚ್ಚರಿಸಿ ........ಗೋತ್ರಸ್ಯ ... ... ಶರ್ಮಣಃ ಬ್ರಹ್ಮಚಾರಿಣಃ ಮೃತಸ್ಯ ವ್ರತವಿಸರ್ಗಂ ಕರಿಷ್ಯೇ ॥ ಎಂದು ಸಂಕಲ್ಪಿಸಿ ಹಿರಣ್ಯದಿಂದ ನಾಂದೀ ಶ್ರಾದ್ಧವನ್ನುಮಾಡಿ ಅಗ್ನಿ ಪ್ರತಿಷ್ಠಾಪನಾದಿ ಆಘಾರದವರೆಗೆ ಮಾಡಿ ತುಪ್ಪದಿಂದ ವ್ಯಾಹೃತಿಗಳನ್ನು ಕೊಟ್ಟು-

ಓಂ ಅಗ್ನಯೇ ವ್ರತಪತೆಯೇ ಸ್ವಾಹಾ । ಅಗ್ನಯೇ ವ್ರತಪತಯ ಇದಂ ॥ ಎಂದು ಲಿಂಗಾನುಸಾರ ತ್ಯಾಗವನ್ನು ಹೇಳಬೇಕು.

ಓಂ ಅಗ್ನಯೇ ವ್ರತಾನುಷ್ಠಾನ ಫಲಸಂಪಾದನಾಯ ಸ್ವಾಹಾ ॥ ವಿಶ್ವೇಭ್ಯೋದೇವೇಭ್ಯಸ್ಸ್ವಾಹಾ ॥ ಎಂದು ಹೋಮಿಸಿ ಹೋಮಶೇಷವನ್ನು ಸಮಾಪಿಸಿ ಪುನಃ ದೇಶಕಾಲಗಳನ್ನುಚ್ಚರಿಸಿ ಅನುಕ ಬ್ರಹ್ಮಚಾರಿಣಃ ಔರ್ಧ್ವದೈಹಿಕಾಧಿಕಾರಾರ್ಥಂ ಅರ್ಕವಿವಾಹಂ ಕರಿಷ್ಯೇ ॥ ಎಂದು ಸಂಕಲ್ಪಿಸಿ ಹಿರಣ್ಯದಿಂದ ನಾಂದೀ ಶ್ರಾದ್ಧವನ್ನು ಮಾಡಿ ಎಕ್ಕೆಗಿಡದ ಹತ್ತಿರಹೋಗಿ ಅಥವಾ ಎಕ್ಕೆಯ ಕೊಂಬೆಯನ್ನಾದರೂ ಹಿಡಿದು ಎಕ್ಕೆ ಮತ್ತು ಬ್ರಹ್ಮಚಾರಿಗಳನ್ನು ಅರಸಿನಹುಡಿಯಿಂದ ಲೇಪಿಸಿ ಹಳದಿದಾರದಿಂದ ಸುತ್ತಿ ಎರಡು ವಸ್ತ್ರಗಳಿಂದ ಮುಚ್ಚಿ ಅಗ್ನಿ ಪ್ರತಿಷ್ಠಾಪನೆಮೊದಲಾಗಿ ಆಘಾರಾಂತದವರೆಗೆ ಮಾಡಿ ತುಪ್ಪದಿಂಡ ಹೋಮಿಸಲಿಕ್ಕಿರುವ ಮಂತ್ರಗಳು-

ತ್ಯಾಗವನ್ನು ಲಿಂಗಾನುಸಾರ ಮಾಡಬೇಕು.

ಓಂ ಅಗ್ನಯೇ ಸ್ವಾಹಾ ॥ ಬೃಹಸ್ಪತಯೇ ಸ್ವಾಹಾ ॥ ವಿವಾಹವಿಧಿಯೋಜಕಾಯ ಸ್ವಾಹಾ ॥ ಯಸ್ಮೈ ತ್ವಾ ಕಾಮಕಾಮಾಯ ವಯಂ ಸಮ್ರಾಡ್ಯಜಾಮಹೇ । ತಮಸ್ಮಭ್ಯಂ ಕಾಮಂ ದತ್ವಾಽಥೇದಂ ತ್ವಂ ಘೃತಂ ಪಿಬ ಸ್ವಾಹಾ ॥

ಕಾವನಾಯೇದಂ ॥ ಮತ್ತೆ ಭೂರಾದಿ ನಾಲ್ಕು ಮಹಾವ್ಯಾಹೃತಿಗಳಿಂದಲೂ ಹೋಮಿಸಿ ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಗಿಸಬೇಕು.

ಎಕ್ಕೆಕೊಂಬೆಯನ್ನೂ ಬ್ರಹ್ಮಚಾರಿಶವವನ್ನು ಕೂಡ ತುಷಾಗ್ನಿಯಿಂದ ವಿಧಿಪ್ರಕಾರ ಸುಡಬೇಕು. ಸ್ನಾತಕ ಮರಣದಲ್ಲಿಯೂ ಹೀಗೆಯೇ ಮಾಡಬೇಕೆಂದು ಕೆಲವರ ಮತ. ಆಶೌಚಾಂತ್ಯದಲ್ಲಿ ಮೂವತ್ತು ಬ್ರಹ್ಮಚಾರಿಗಳಿಗೆ ಕೌಪೀನ ಕೃಷ್ಣಾಜಿನ ಯಜ್ಞೋಪವೀತ ಗೋಪೀಚಂದನಾದಿಗಳನ್ನು ಕೊಟ್ಟು ಊಟಮಾಡಿಸಬೇಕು.

## ಕುಷ್ಠರೋಗಿ ಸತ್ತರೆ ಪ್ರಾಯಶ್ಚಿತ್ತ

ದೇಶಕಾಲಗಳನ್ನುಚ್ಚರಿಸಿ ಕುಷ್ಠಾದಿ ಮಹಾರೋಗನ್ಮೃತಸ್ಯೌರ್ಧ್ವದೈಹಿಕಾಧಿಕಾರ ಸಿದ್ಧ್ಯರ್ಥಂ ಆದೌ ಷಡಬ್ದಪ್ರಾಯಶ್ಚಿತ್ತಂ ಕರಿಷ್ಯೇ ॥ ಎಂದು ಸಂಕಲ್ಪಿಸಿ ದಹನಾದಿಗಳನ್ನು ಮಾಡಬೇಕು. ವಿಶೇಷವೇನೆಂದರೆ ಪ್ರೇತಸ್ನಾನ, ದಹನದೇಶ ಸಮ್ಮಾರ್ಜನೆ, ಎಳ್ಳುಹಾಕುವುದು, ಚಿತೆಯಲ್ಲಿ ಪ್ರೇತವನ್ನಿಡುವುದು, ಅಪಸಲಗಳಿಂದ ಪರಿಸ್ತರಣವಿಡುವುದು, ಇವೆಲ್ಲ ತೂಷ್ಣಿಯಲ್ಲಿ. ಪ್ರೇತದಬಾಯಿಗೆ ತುಪ್ಪವನ್ನು ಈ ಮಂತ್ರಗಳಿಂದ ಹಾಕಬೇಕು–

ವಸುಭ್ಯೋ ರುದ್ರೇಭ್ಯ ಆದಿತ್ಯೇಭ್ಯೋ ವಿಶ್ವೇಭ್ಯೋ ದೇವೇಭ್ಯಸ್ಸಾಧ್ಯೇಭ್ಯೋ ಮರುದ್ಭ್ಯ ಋಭುಭ್ಯಃ ಪಿತೃಭ್ಯ ಸ್ವಾಹಾ ॥ ಎಂದು. ಇದೇ ಮಂತ್ರದಿಂದ ಸಿಗ್ವಾತದಿಂದ ಬೀಸುವುದು. ನೀರಿನ ಪಾತ್ರದಿಂದ ತೂಷ್ಣಿಯಲ್ಲಿ ಪರಿಷೇಚನೆ, ಕಪಾಲದ ನೀರನ್ನು ಬಾಯಿಗೆ ಬಿಡುವುದೆಲ್ಲ ಇಲ್ಲ. ಉತ್ತಪನಾಗ್ನಿಯಿಂದ ದಹಿಸುವುದು. ಬೇರೆ ಎಲ್ಲಾ ಸಮಾನ. ಹೀಗೆಯೇ ಉಪನಯನವಾಗದಿದ್ದವರ ಮತ್ತು ಉನ್ಮಾದಾದಿಹಿಡಿದು ಸತ್ತವರ ಸಂಸ್ಕಾರವು. ಒಂದುವೇಳೆ ಯುದ್ಧಾದಿಗಳಲ್ಲಿ ಅಥವಾ ಕಾಡಿನಲ್ಲಿ ಹುಲಿಮೊದಲಾದುವುಗಳಿಂದ ಕೊಲ್ಲಲ್ಪಟ್ಟು ಶವಹ

ತಲೆಮಾತ್ರ ಸಿಕ್ಕಿತಾದರೆ ಅದನ್ನು ತಂದು " ಸಪ್ತಪ್ರಾಣಾಸ್ತದಾಶ್ರಯಾಃ " ಎಂದು ಜೇನನ್ನು ಯಾ ತುಪ್ಪವನ್ನು ಹಚ್ಚಿ ಕರ್ಣಸೂಕ್ತಾದಿ ಎಲ್ಲಾ ಪೈತೃಕ ವನ್ನೂ ಮಾಡಬೇಕು.

## ಗರ್ಭಿಣಿಯು ಆರುತಿಂಗಳಮೇಲೆ ಸತ್ತರೆ ಸಂಸ್ಕರಿಸುವ ಕ್ರಮ

ಕರ್ಣಮಂತ್ರಜಪ ಮೊದಲಾಗಿ ಯೋಗ್ಯವಾದ ಅಗ್ನಿಯನ್ನು ಉಂಟುಮಾಡಿ ದಕ್ಷಿಣಾಯನಮರಣಾದಿ ದೋಷಗಳಿದ್ದರೆ ಪ್ರಾಯಶ್ಚಿತ್ತಮಾಡಿ ( ಪ್ರಾಚೀ ) ..... ... ...ಗೋತ್ರಾಂ ....... ...ದಾಂ ಗರ್ಭಿಣೀಂ ಪ್ರೇತಾಂ ಅಮುಕಾಗ್ನಿನಾ ಪೈತೃಮೇಧಿಕ ವಿಧಿನಾ ಸಂಸ್ಕರಿಷ್ಯಾಮಿ ॥ ಎಂದು ಸಂಕಲ್ಪಿಸಿ, ಪರೇಯುವಾಗ್ಂ ಸಂ ಪ್ರವತೋ ಮಹೀರನು ಬಹುಭ್ಯಃ ಪಂಥಾ ಮನಪ ಸ್ಪಶಾನಂ । ವೈವಸ್ವತಗ್ಂ ಸಂಗಮನಂ ಜನಾನಾಂ ಯಮಗ್ಂ ರಾಜಾನಗ್ಂ ಹವಿಷಾ ದುವಸ್ಯತ ॥ ಎಂದು ಸ್ಮಶಾನಕ್ಕೆ ಕೊಂಡುಹೋಗಿ ಚಿತೆಯನ್ನು ತಯಾರಿಸಿ ಅದರ ಪಶ್ಚಿಮದಲ್ಲಿ ಅಗ್ನಿಯನ್ನಿಟ್ಟು ದರ್ಭೆಗಳಿಂದ ಅಗ್ನಿಗೂ ಕಾಷ್ಠಕ್ಕೂ ಅಪಸ ಲವಾಗಿ ಪರಿಸ್ತರಣವಿಟ್ಟು ಪಾತ್ರಾಸಾದನಾದಿ ಸ್ರುಕ್‌ಸ್ರುವ ಸಮ್ಮಾರ್ಜನದ ವರೆಗೆ ಮಾಡಿ ಕಾಷ್ಠದಿಂದ ಪಡುಭಾಗದಲ್ಲಿ ಪರಿಷ್ಕೃತವಾದ ಜಾಗದಲ್ಲಿ ತೆಂಕು ತಲೆಯಾಗುವಂತೆ ಶವವನ್ನಿಟ್ಟು ಶವದ ನಾಭಿಯ ಮೇಲ್ಭಾಗದಲ್ಲಿ ಎಡಬದಿಯಲ್ಲಿ ನೀರಿನಿಂದ ಗೆರೆಯೆಳೆದು

ಓಂ ಹಿರಣ್ಯಗರ್ಭ ಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್। ಸದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥ ಎಂದು ಸ್ವರದಿಂದ ಸೀಳಿ ಮಗುವು ಬದುಕಿದ್ದರೆ ಅದನ್ನು ಮುಟ್ಟಿ "ಜೀವತು ಮಮ ಪುತ್ರೋ ದೀರ್ಘಾಯುತ್ವಾಯ ವರ್ಚಸೇ" ಎಂದು ಜಪಿಸಬೇಕು. ಅನಂತರ ಮಗುವನ್ನು ಹಿರಣ್ಯದಮೇಲೆ ಇಟ್ಟು ಸ್ನಾನಮಾಡಿಸಿ ಮನೆಗೆ ತಂದು–

ಓಂ ಯಸ್ತೇ ಸ್ತನ ಶ್ಶಯೋ ಯೋ ಮಯೋ ಭೂರ್ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ। ಯೋ ರತ್ನಧಾ ವಸುವಿದ್ಯ ಸ್ಸುದತ್ರ ಸ್ಸರಸ್ವತಿ ತಮಿಹ ಧಾತವೇ ಕಃ ॥ ಎಂದು ಯಾರಾದರೊಬ್ಬಳ ಮೊಲೆ ಕುಡಿಸಿ ಸುರಕ್ಷಿತವಾಗಿಟ್ಟು (ಮಗುವು ಸತ್ತಿದ್ದರೆ ಅದಕ್ಕೆ ತುಪ್ಪಹಚ್ಚಿ ಅಲ್ಲೇ ಭೂಮಿಯಲ್ಲಿ ದಫನ ಮಾಡಬೇಕು.) ಶವದ ಹತ್ತಿರ ಬಂದು ಅದನ್ನು ಮಣ್ಣು ವಿಭೂತಿ ನೀರುಗಳಿಂದ "ಆಪೋಹಿಷ್ಠಾ" ಇತ್ಯಾದಿ ಮಂತ್ರಗಳಿಂದ ಸ್ನಾನ ಮಾಡಿಸಿ ಅವರ ಹೊಟ್ಟೆಗೆ ಆಜ್ಯಾಹುತಿ ಕೊಡಲಿಕ್ಕಿರುವ ಮಂತ್ರ.

ಓಂ ಶತಾಯುಧಾಯ ಶತವೀರ್ಯಾಯ ಶತೋತಯೇಭಿಮಾತಿಷಾಹೇ। ಶತಂಯೋನ ಶ್ಶರದೋ ಅಜೀತಾನಿಂದ್ರೋನೇಷದತಿ ದುರಿತಾನಿ ವಿಶ್ವಾ ಸ್ವಾಹಾ ॥ ಇಂದ್ರಾಯೇದಂ ॥

ಓಂ ಯೇ ಚತ್ವಾರಃ ಪಥಯೋ ದೇವಯಾನಾ ಅಂತರಾದ್ಯಾವಾ ಪೃಥಿವೀ ವಿಯಂತಿ । ತೇಷಾಂ ಯೋ ಅಜ್ಯಾನಿ ಮ ಜೀ ತಿ ಮಾ ವ ಹಾ ತ್ತಸ್ಮೈ ನೋ ದೇವಾಃ ಪರಿದತ್ತೇಹ ಸರ್ವೇ ಸ್ವಾಹಾ ॥ ದೇವೇಭ್ಯ ಇದಂ ॥

ಓಂ ಗ್ರೀಷ್ಮೋ ಹೇಮಂತ ಉತನೋ ವಸಂತ ಶ್ಶರದ್ವರ್ಷಾ ಸ್ಸುವಿ ತನ್ನೋ ಅಸ್ತು । ತೇ ಷಾ ಮೃ ತೂ ನಾ ಗ್ಂ ಶತಶಾರದಾನಾಂ ನಿವಾತ ಏಷಾ ಮಭಯೇ ಸ್ಯಾಮ ಸ್ವಾಹಾ ॥ ಗ್ರೀಷ್ಮಾದಿ ಋತುಭ್ಯ ಇದಂ ॥

ಓಂ ಇದುವತ್ಸರಾಯ ಪರಿವತ್ಸರಾಯ ಸಂವತ್ಸರಾಯ ಕೃಣುತಾ ಬೃಹನ್ನಮಃ ॥ ತೇಷಾಂ ವಯಗ್ಂ ಸುಮತೌ ಯಜ್ಞಿಯಾನಾಂ ಜ್ಯೋಗ ಜೀತಾ ಅಹತಾಸ್ಸ್ಯಾಮ ಸ್ವಾಹಾ ॥ ಇದುವತ್ಸರಾದಿಭ್ಯ ಇದಂ ॥

ಓಂ ಭದ್ರಾನ್ನ ಶ್ಶ್ರೇಯ ಸ್ಸಮನೈಷ್ಟ ದೇವಾ ಸ್ತ್ವಯಾ ವಸೇನ ಸಮಶೀಮಹಿ ತ್ವಾ । ಸ ನೋ ಮಯೋಭೂಃ ಪಿತೋ ಆವಿಶಸ್ವಶಂ ತೋಕಾಯ ತನುವೇ ಸ್ಯೋನ ಸ್ವಾಹಾ ॥ ದೇವೇಭ್ಯ ಇದಂ ॥

ಮುಂದೆ ಯಥಾಲಿಂಗವಾಗಿ ತ್ಯಾಗಮಾಡಬೇಕು.

ಓಂ ಪ್ರಯಾಸಾಯ ಸ್ವಾಹಾ ॥ ಆಯಾಸಾಯ ... ॥ ವಿಯಾಸಾಯ ... ॥ ಸಂಯಾಸಾಯ.... ॥ ಉದ್ಯಾಸಾಯ.... ॥ ಅವಯಾಸಾಯ ... ॥ ಶುಚೇ ... ॥

ಶೋಕಾಯ ... ॥ ತಸ್ಯೈತ್ಯೈ ... ॥ ತಪತೇ .... ॥ ಬ್ರಹ್ಮಹತ್ಯಾಯೈ .... ॥ ಸರ್ವಸ್ಮೈ ... ॥ ಪ್ರಾಣಾಯ ... ॥ ವ್ಯಾನಾಯ .... ॥ ಅಪಾನಾಯ .... ॥ ಚಕ್ಷುಷೇ .... ॥ ಶ್ರೋತ್ರಾಯ .... ॥ ಮನಸೇ .... ॥ ವಾಚೇ .... ॥ ಸರಸ್ವತ್ಯೈ ... ॥ ಪೂಷ್ಣೇ .... ॥ ಪೂಷ್ಣೇ ಶರಸೇ ... ॥ ಪೂಷ್ಣೇ ಪ್ರಪಥ್ಯಾಯ ... ॥ ಪೂಷ್ಣೇ ನರಂಧಿಷಾಯ .... ॥ ಪೂಷ್ಣೇಽಂಘೃಣಯೇ .... ॥ ಪೂಷ್ಣೇಽನರುಣಾಯ ... ॥ ಪೂಷ್ಣೇ ಸಾಕೇತಾಯ .... ॥

ಎಂದು ಹೋಮಿಸಿ ಸೂಜಿಯಿಂದ ಹೊಟ್ಟೆಯನ್ನು ಹೊಲಿದು ವಸ್ತ್ರ ಮುಚ್ಚಿ " ಪ್ರೇತೋದರ ವಿದಾರಣ ದೋಷನಿವೃತ್ತ್ಯರ್ಥಂ ತ್ರಿಂಶತ್ ಕೃಚ್ಛ್ರ ಪ್ರತ್ಯಾಮ್ನಾಯ ಹಿರಣ್ಯದಾನಂ ಅಷ್ಟಕಾಧೇನು ತಿಲಧೇನು ಭೂಮಿಧೇನು ದಾನಂ ಚ ಸೂತಕಾಂತೇ ಕರಿಷ್ಯೇ " ಎಂದು ಸಂಕಲ್ಪಿಸಿ ಸೂತಕಾಂತ್ಯದಲ್ಲಿ ಕೊಡಬೇಕು. ಪ್ರೇತವನ್ನು ಕಾಷ್ಠದಲ್ಲಿಟ್ಟು ತೂಷ್ಣೀಯಲ್ಲಿ ಚಿನ್ನದಿಂದ ಹಸ್ತ ಸಮ್ಮಾರ್ಜನಾದಿ ಎಲ್ಲಾ ಕೆಲಸಗಳನ್ನು ಮಾಡಬೇಕು.

## ಹೆಂಡತಿಯು ಮುಟ್ಟಿನಲ್ಲಿ ಯಾ ಬಾಣಂತಿತನದಲ್ಲಿರುವಾಗ ಗಂಡನು ಸತ್ತರೆ ಪ್ರೇತಾಗ್ನಿ ಸಂಧಾನವು

ಕರ್ತೃವು ( ಪ್ರಾಚೀ ) ... .......ಗೋತ್ರಸ್ಯ ... ......ಪ್ರೇತಸ್ಯ ಮರಣಕಾಲೇ ಭಾರ್ಯಾಯಾ ರಜಸಿ ಪ್ರಸೂತೌ ವಾ ಪ್ರೇತಾಗ್ನಿ ಸಂಧಾನಂ ಪಿತೃಮೇಧ ಸೂತ್ರೋಕ್ತ ಪ್ರಾಯಶ್ಚಿತ್ತಂ ಚ ಕರಿಷ್ಯೇ ॥

ಎಂದು ಸಂಕಲ್ಪಿಸಿ ಮೊದಲು ಹೇಳಿದ ರೀತಿಯಲ್ಲಿ ಅಭ್ಯಾವರ್ತಿನೀ ಹೋಮದವರೆಗೆ ಮಾಡಿ ನಾಲ್ಕುಸಲ ತುಪ್ಪ ತೆಗೆದು

ಓಂ ಜಾತವೇದಸೇ ಸುನವಾಮ ಸೋಮಮರಾತೀಯತೋ ನಿದಹಾತಿ ವೇದಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ಸ್ವಾಹಾ ॥ ಅಗ್ನಯೇ ಜಾತವೇದಸ ಇದಂ ॥ ಪುನಃ ನಾಲ್ಕು ಸಲ ತೆಗೆದ ತುಪ್ಪದಿಂದ–

ಓಂ ಮನೋ ಜ್ಯೋತಿರ್ಜುಷತಾಮಾಜ್ಯಂ ವಿಚ್ಛಿನ್ನಂ ಯಜ್ಞಗ್ಂ ಸಮಿಮಂ ದಧಾತು । ಯಾ ಇಷ್ಟಾ ಉಷಸೋ ನಿಮ್ರುಚಶ್ಚ ತಾಸ್ಸಂದಧಾಮಿ ಹವಿಷಾ ಘೃತೇನ ಸ್ವಾಹಾ ॥ ಮನಸೇಜ್ಯೋತಿಷ ಇದಂ ॥ ಪುನಃ ಚಕ್ಷುರ್ಗೃಹೀತದಿಂದ–

ಓಂ ತಂತುಂ ತನ್ವನ್ರಜಸೋಭಾನು ಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್ । ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂ ಜನಂ ಸ್ವಾಹಾ ॥ ಅಗ್ನಯೇ ತಂತುಮತ ಇದಂ ॥

ಓಂ ಉದ್ಬುಧ್ಯಸ್ವಾಗ್ನೇ ಪ್ರತಿಜಾಗೃಹ್ಯೇನಮಿಷ್ಟಾಪೂರ್ತೇ ಸಗ್ಂ ಸೃಜೇಥಾಮಯಂ ಚ । ಪುನಃ ಕೃಣ್ವಗ್ಂಸ್ತ್ವಾ ಪಿತರಂ ಯುವಾನಮನ್ವಾತಾಗ್ಂ ಸೀ ತ್ವಯಿ ತಂತುಮೇತಗ್ಂ ಸ್ವಾಹಾ ॥ ಅಗ್ನಯೇ ತಂತುಮತ ಇದಂ ॥

ಓಂ ತ್ರಯಸ್ತ್ರಿಗ್ಂಶತ್ತಂತವೋ ಯೇ ವಿತತ್ನಿರೇ ಯ ಇಮಂ ಯಜ್ಞಗ್ಂ ಸ್ವಧಯಾ ದದಂತೇ ತೇಷಾಂ ಛಿನ್ನಂ ಪ್ರತ್ಯೇತದ್ದಧಾಮಿ ಸ್ವಾಹಾ ಘರ್ಮೋ ದೇವಾಗ್ಂ ಅಪ್ಯೇತು ಸ್ವಾಹಾ ॥ ಅಗ್ನಯೇ

ತಂತುಮತ ಇದಂ ॥ ಪುನಃ ಚತುರ್ಗೃಹೀತದಿಂದ ಮಹಾವ್ಯಾಹೃತಿಗಳಿಂದ ಹೋಮಿಸಿ ಪುನಃ ಚತುರ್ಗೃಹೀತದಿಂದ ಭೂರಾದಿ ನಾಲ್ಕರಿಂದಲೂ ಹೋಮಿಸ ಬೇಕು. ಹೀಗೆ ಅಗ್ನಿಸಂಧಾನವನ್ನು ಮಾಡಿ ಪ್ರಾಯಶ್ಚಿತ್ತವು— ಸ್ರುವದಿಂದ ಸ್ರುಕ್ಕಿನಲ್ಲಿ ಹನ್ನೆರಡುಸಲ ತುಪ್ಪತುಂಬಿಸಿ—

ಓಂ ಜಾತವೇದವೇ ಇತ್ಯಾದಿ ಐದು ಮಂತ್ರಗಳನ್ನೂ ಮನಸ್ವತಿಯನ್ನೂ ಮಹಾವ್ಯಾಹೃತಿಗಳನ್ನೂ ಎಡೆಬಿಡದೆ ಹೇಳುತ್ತಾ ಒಂದಾಹುತಿಯನ್ನು ಹೋಮಿ ಸಬೇಕು. ಪುನಃ ಚತುರ್ಗೃಹೀತದಿಂದ—

ಓಂ ಅಪ ಪಾಪ್ಮಾನಂ ಭರಣೀರ್ಭರಂತು । ತದ್ಯಮೋ ರಾಜಾ ಭಗವಾನ್ವಿಚಷ್ಟಾಂ ॥ ಲೋಕಸ್ಯ ರಾಜಾ ಮಹತೋ ಮಹಾನ್ ಹಿ । ಸುಗಂ ನಃ ಪಂಥಾಮಭಯಂ ಕೃಣೋತು ಸ್ವಾಹಾ ॥ ಯಮಾಯ ರಾಜ್ಞ ಇದಂ ॥

ಓಂ ಯಸ್ಮಿನ್ನಕ್ಷತ್ರೇ ಯಮ ಏತಿ ರಾಜಾ । ಯಸ್ಮಿನ್ನೇನಮಭ್ಯ ಷಿಂಚಂತಿ ದೇವಾಸ್ತದಸ್ಯ ಚಿತ್ರಗ್ಂ ಹವಿಷಾ ಯಜಾಮ । ಅಪಪಾಪ್ಮಾ ನಂ ಭರಣೀರ್ಭರಂತು ಸ್ವಾಹಾ ॥ ಯಮಾಯ ರಾಜ್ಞ ಇದಂ ॥

ಅನಂತರ ಸ್ರುವದಿಂದ ಅನಾಜ್ಞಾತಾದಿ ಮೂರರಿಂದಲೂ ಯನ್ಮ ಆತ್ಮನೋ ಎಂಬ ಎರಡು ಮಿಂದಾಹುತಿಗಳಿಂದಲೂ ಭೂರಾದಿ ನಾಲ್ಕು ವ್ಯಾಹೃತಿಗಳಿಂದಲೂ ಹೋಮಿಸಿ ಹೋಮಶೇಷವನ್ನು ಮುಗಿಸಬೇಕು. [redacted] ದಲ್ಲಿ ಒಂದು ಗೋದಾನವನ್ನೂ ಮಾಡಬೇಕು. ಆಶೌಚಾಂತ್ಯ

॥ ಸಂಪೂರ್ಣಂ ॥